ದೊಡ್ಡ ದೊಡ್ಡ ಸತ್ಯ ನಮ್ಮ ಮುಂದೆಯೆ
ಬಿದ್ದುಕೊಂಡು ಒದ್ದಾಡುತ್ತಿದ್ದರೂ
ಸುಮ್ಮಕೆ ಇದ್ದೇವೆ ಯಾವಾಗ ನಾವುಗಳು
ಅದನ್ನು ಕಲಿಯುವದು ಆದರೂ
ತಿಳಿದವರ ಕಾಲು ಹಿಡಿದುಕೊಂಡು ಕಲಿಯುವವರು
ಹಿಂದಿನ ಕಾಲದಲ್ಲಿ ಇದ್ದರು
ಕಲಿಯುವ ಮಂದಿ ಎಲ್ಲವರು ಈಗ
ಕಲಿಸುವವರ ಮೇಲೆ ಬಂದು ಬಿದ್ದರು

## शब्दार्थ

| | |
|---|---|
| ಹೆಂಡ | ताडी |
| ಕಂತೆ | चरळणे |
| ನಗದೆ | न हसता |
| ಇದ್ದೇ ಇರುತ್ತದೆ-ಗೋಳು | त्रास हा नेहमीचाच आहे |
| ನೆನಪಿಗೆಬರು | आठवणे |
| ತಿರುಳು | सत्य |
| ಒದ್ದಾಡು | तडफडणे |
| ಸುಮ್ಮನೆ | गप |
| ನಾವು ಕಲಿಯುವುದಾದರೂ ಯಾವಾಗ | आम्ही शिकावे तरी केव्हा ? |
| ಮಂದಿ | लोक |
| ಕಲಿಸುವವರ ಮೇಲೆ ಬಿದ್ದರು | शिक्षकांनाच हात दाखवू लागले |



ಧಡಾ ೨೯ ವಾ ಇಪ್ಪತ್ತೊಂಬತ್ತನೆಯ ಪಾಠ

## ಕಾವ್ಯಾವಲೋಕನ

### ಒಲುಮೆ

ಕರ್ನಾಟಕ ಕಾವ್ಯದ ಈಗಣ ವಸಂತದ ಹೊಸ ದಿನಗಳಲ್ಲಿ ನನಗೆ "ಜಯ ಕರ್ನಾಟಕ"ದ ಒಂದು ಸಂಚಿಕೆಯಲ್ಲಿ ಸಣ್ಣದೊಂದು ಪ್ರಣಯ ಕವಿತೆ ಕಣ್ಣಿಗೆ ಬಿತ್ತು. ಅದರಲ್ಲಿ ಎರಡೆರಡು ಸಾಲಿನ ಪದ್ಯಗಳು ಆರೋ ಎಂಟೋ ಇದ್ದವು ಅದರ ಕೊನೆಯಲ್ಲಿ "ತಿ. ನಂ. ಶ್ರೀ" ಎಂದು ಸಹಿ ಇತ್ತು. ಲೇಖಕರು ನನಗೆ ತಿಳಿದವರಲ್ಲ. ಪದ್ಯಗಳ ರಚನೆ, ಮಾತಿನ ಮಿತ, ಭಾವದ ಹಿಡಿತವಾದ ಬಿಕ್ಕು - ಇವುಗಳಿಂದ ನನಗೆ ಬಹಳ ಮೆಚ್ಚಿಕೆಯಾಯಿತು. ಈ ಲೇಖಕರು ತರುಣರಾಗಿದ್ದು ಹೀಗೆಯೆ ಮುಂದೆ ನಡೆಯಬಲ್ಲರಾದರೆ ಇವರಿಂದ ನಮಗೆ ಬಹಳ ಒಳ್ಳೆಯ ಕವಿತೆಗಳು ಬರಬೇಕು, ಎಂದು ನಾನು ಯೋಚಿಸಿಕೊಂಡೆನು. ಆಗ ಒಂದೆರಡು ಕಡೆ ಹೇಳಿದೆನು ಮತ್ತು ಲೇಖಕರು ಯಾರೆಂದು ವಿಚಾರಿಸಿದೆನು. ಬೆಂಗಳೂರ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಲ್ಲಿ ಅವರಿಗೆ ಒಂದು ಬಹುಮತಿ ಬಂದ ಸಂದರ್ಭದಲ್ಲಿ ನನಗೆ ಅವರ ಪರಿಚಯವು ಆಯಿತು. ಮೈಸೂರ ಮಹಾರಾಜರ ಕರ್ನಾಟಕ ಸಂಘದಿಂದ ಈಚೆಗೆ ಪ್ರಕಟವಾದ ಕವನ ಗ್ರಂಥಗಳಲ್ಲಿ ಇವರು ಕೆಲವು ಪದ್ಯಗಳನ್ನು ಪ್ರಕಟಿಸಿದರು. ಆದರೆ ಇದರಿಂದ ನನಗೆ ತೃಪ್ತಿಯಾಗಲಿಲ್ಲ. ತರುಣರಾದ ಲೇಖಕರು ಒಂದು ಪದ್ಯ ಎರಡು ಪದ್ಯವನ್ನು ಬರೆದು ನಿಲ್ಲಿಸಿದರೆ ಯಾರಿಗೂ ತೃಪ್ತಿಯಿಲ್ಲ. ಈಗ ಇವರು 'ಒಲುಮೆ'ಯೆಂಬ ಹೆಸರಿನಿಂದ ತಮ್ಮ ಸಣ್ಣ ಕವಿತೆಗಳ ಸಣ್ಣ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇವರು ಪದ್ಯವನ್ನು ಬರೆಯುವುದನ್ನೇ ನಿಲ್ಲಿಸಿದರೋ ಎಂದು ಯೋಚಿಸುತ್ತಿದ್ದ ಇವರ ಮಿತ್ರರಿಗೆ ಇದರಿಂದ ಸ್ವಲ್ಪ ಸಮಾಧಾನವಾಗಿದೆ.

ಒಂದು ಸಾಹಿತ್ಯವೆಂದ ಮೇಲೆ ಅದರಲ್ಲಿ ಒಲುಮೆಯ ಕವಿತೆ ಇರಲೇಬೇಕು. ಕದ್ದೋ ಕಾದಾಡಿಯೋ ಹೆಣ್ಣನ್ನು ಸೆಗೆದುಕೊಂಡು ಹೋಗುವ ಕಾಡು ಮನುಷ್ಯನ ಮೊದಲು, ಹೆಣ್ಣೆನ್ನುವುದು ದೈವ ಅದನ್ನು ಒಲಿಸಿಕೊಳ್ಳುವುದು ಪೂಜೆ, ಅದು ಒಲಿಯುವುದು ಸಿದ್ಧಿ ಎನ್ನುವ ಸಾತ್ವಿಕ

ಪ್ರಣಯಿಯವರೆಗೆ ಮಾನವ ವರ್ಗವೆಲ್ಲ ಪ್ರಣಯದ ಒಂದಲ್ಲ ಒಂದು ರೂಪವನ್ನು ಹೃದಯದಲ್ಲಿ ಅನುಭವಿಸುತ್ತದೆ. ಒಲುಮೆಯಿಲ್ಲದ ಬಾಳಿಲ್ಲ. ಅದರ ದಾರಿಯನ್ನು ತಿದ್ದಿಕೊಳ್ಳದೆ ಸಮಾಜದ ಆತ್ಮಕ್ಕೆ ಬೆಳವಣಿಗೆಯಿಲ್ಲ. ನಮ್ಮ ಸಮಾಜದಲ್ಲಿ ಇರುವ ಒಲುಮೆಯನ್ನು ಚಿತ್ರಿಸಿ ಒಂದು ಒಳ್ಳೆಯ ದನ್ನು ಬಣ್ಣಿಸಿ ನಮ್ಮನ್ನು ಮುಂದಕ್ಕೆ ಒಯ್ಯುವುದಕ್ಕೂ ನಮ್ಮ ಸಾಹಿತ್ಯ, ಒಲುಮೆಯನ್ನು ಕುರಿತ ಕೃತಿಗಳನ್ನು ರಚಿಸಬೇಕಾಗಿದೆ. ಶ್ರೀಮಾನ್ ತೀರ್ಥಪುರದ ಶ್ರೀಕಂಠಯ್ಯನವರು ಈ ಕೆಲಸವನ್ನು ಚನ್ನಾಗಿ ಆರಂಭ ಮಾಡಿದ್ದಾರೆ.

ಪ್ರಣಯದ ಕೃತಿಯನ್ನು ಬರೆಯುವುದು ಎಲ್ಲಿಯಾದರೂ ಕಷ್ಟವೇ. ನಮ್ಮಲ್ಲಿ ಅದು ಬಹಳ ಕಷ್ಟ. ಆಂಗ್ಲ ಸಾಹಿತ್ಯದಲ್ಲಿ ಉತ್ತಮ ರೀತಿಯ ಇಂಥ ಗೀತೆಗಳನ್ನು ಬರೆಯುವವರಿಗೆ ಪ್ರಣಯದ ಬಹು ಸಂದರ್ಭಗಳ ಅನುಭವಕ್ಕೆ ಸೌಕರ್ಯ ಹೆಚ್ಚು. ನಮ್ಮಲ್ಲಿ ಕಾವ್ಯ ಬರೆಯುವ ಪ್ರವೃತ್ತಿ ಯುಳ್ಳ ತರುಣರಿಗೆ ಅನೇಕರಿಗೆ ಸತಿಯರಿರುತ್ತಾರೆ. ಹಾಗಿಲ್ಲದವರು ನೋಡಿ ಮೆಚ್ಚುವ ತರುಣಿಯರು ಸೋದರರಿಗೆ ಸತಿಯರಾಗಿರುತ್ತಾರೆ. ನಮ್ಮ ತರುಣನ ಮನಸ್ಸು ಪ್ರಣಯದಕಡೆಗೆ ಕುಡಿಹಾಯುವ ಹೊತ್ತಿಗೆ ಆ ಪ್ರಣಯಕ್ಕೆ ಸಾಧ್ಯವಾದ ಒಂದು ನೆಲೆ ಇಲ್ಲದೆ ಹೋಗಬಹುದು. ಹಾಗೆ ಇರುವಲ್ಲಿ ಅದರ ಪ್ರಸಾರ ಕಡಿಮೆ. ಇದರ ಮೇಲೆ ತನ್ನ ಮಾತನ್ನು ತಾನು ಹೇಳಿಕೊಳ್ಳುವುದಕ್ಕೆ ಮನುಷ್ಯನಿಗೆ ಎಂದಿದ್ದರೂ ಸಂಕೋಚ. ಪ್ರಣಯದ ಮಾತಿನಲ್ಲಿ ಈ ಸಂಕೋಚ ಇದ್ದದ್ದೂ ಹೆಚ್ಚು. ಹೀಗಾಗಿ ನಮ್ಮ ಸಮಾಜದ ಪರಿಸ್ಥಿತಿಯಿಂದ ನಮ್ಮಲ್ಲಿ ಶುದ್ಧವಾದ ಪ್ರಣಯ ಗೀತ ವಿಸ್ತಾರವಾಗುವುದಕ್ಕೆ ಅವಕಾಶ ಕಡಿಮೆಯಾಗಿದೆ. ಶುದ್ಧಿಮಾಡಿಕೊಂಡ ಇಂಥಾ ಸಣ್ಣ ಚೌಕದಲ್ಲಿ ಕುಳಿತು ಪಾಕಮಾಡಿದ್ದರೂ ಶ್ರೀ ಕಂಠಯ್ಯನವರು ತಮ್ಮ ಕೃತಿಯಲ್ಲಿ ರಸವನ್ನು ತಂದಿದ್ದಾರೆ. ಹೃದಯದಲ್ಲಿ ಪ್ರಣಯದ ದೀಪವು ಹಚ್ಚುವ ರೀತಿ, ಅದರ ಪಾತ್ರದಲ್ಲಿ ಸ್ನೇಹ ಸೇರಿ ಅದು ಬೆಳೆಯುವ ರೀತಿ, ಸ್ನೇಹ ಕಡಿಮೆಯಾಗಿ ಅದು ಕುಗ್ಗುವ ರೀತಿ, ಪ್ರಣಯಿಗಳು ಓದಿಗಾಗಿ ದೇಹದಿಂದ ದೂರವಿರುವ ಅಥವಾ ಒಂದು ನೀತಿಗಾಗಿ ಮನಸ್ಸಿನಿಂದ ದೂರವಾಗಿರುವ ಹೊತ್ತಿನಲ್ಲಿ ಅವರ ಹೃದಯದ ಆ ದೀಪ ನಂದದಿದ್ದರೂ ಕುಂದಿರುವ ರೀತಿ, ಅದು ಬೆಳಗುತ್ತಿರುವ

ಹೊತ್ತಿನಲ್ಲಿ ಗಾಳಿ ಬೀಸಿ ಅದು ಆರಿ ಹೋಗಿ ಕತ್ತಲು ಮುಚ್ಚುವ ರೀತಿ. ಇದನ್ನೆಲ್ಲಾ ಈ ಕೃತಿಗಳಲ್ಲಿ ಕವಿ ಸುಂದರವಾದ ಮಾತಿನಲ್ಲಿ ಚಿತ್ರಿಸಿದ್ದಾರೆ.

ಶ್ರೀಮಾನ್ ಶ್ರೀ ಕಂಠಯ್ಯನವರ ಪದ್ಯಗಳೂ, ಅನುವಾದಗಳೂ ಬಹಳ ಚನ್ನಾಗಿವೆ. ಇವರು ಅನುಭವಿಗಳು, ಕವಿಗಳು, ರಸಾಭಿಜ್ಞರು. ಇವರಿಗೆ ಭಾಷೆಯಲ್ಲಿ ಅಸಾಧಾರಣ ಶಕ್ತಿಯಿದೆ. ಅಸಾಧಾರಣ ಪ್ರೌಢಿಮೆ ಯಿದೆ. ಇವರ ಕಾವ್ಯದ ಪದ್ಧತಿ ಕಂಡ ಅರ್ಥವನ್ನು ಸರಳವಾಗಿ, ಸರಸ ವಾಗಿ ಹೇಳುವ ಸಹಜ ಪದ್ಧತಿ.

[ श्री मास्ती वेंकटेश अय्यंगार "श्रीनिवास" यांनी केलेली श्री. ती. न. श्रीकंठय्या यांच्या ओलुमे ( प्रीती ) या कविता संग्रहाची समीक्षा ]

**कठीण शब्द व कल्पना**

| | |
|---|---|
| ಸಂಚಿಕೆ | अंक ( मासिकाचा ) |
| ಹಿಡಿತವಾದ ಬಿಚ್ಚು | सुटसुटीत मांडणी |
| ಬಹುಮತಿ | पारितोषक |
| ಕವನ | काव्य |
| ಒಲುಮೆ | प्रीती |
| ಒಂದು ಸಾಹಿತ್ಯವೆಂದ ಮೇಲೆ | कोणतेहि साहित्य म्हटले तर |
| ಕದ್ದೋ ಕಾದಾಡಿಯೋ | चोरुन किंवा लढून |
| ಕಾಡು ಮನುಷ್ಯನ ಮೊದಲು | रानटी मनुष्यापासून...ते... |
| ದೈವ | दैवत |
| ಒಲಿಸಿಕೊಳ್ಳು | प्रसन्न करुन घेणे |
| ಒಲಿಮೆಯಿಲ್ಲದೆ ಬಾಳಿಲ್ಲ | प्रीतीविणे जिणे नाही |
| ತಿದ್ದಿಕೊಳ್ಳು | सुधारुन घेणे |
| ಬಣ್ಣಿಸು | वर्णन करणे |
| ಕುರಿತ | संबंधी |
| ಸೌಕರ್ಯ | सोय |
| ಸತಿ | बायको |
| ಹಾಗಿಲ್ಲದವರು | जे तसे ( विवाहित ) नाहीत ते |
| ಸೋದರ | बंधू |

| | |
|---|---|
| ಕುಡಿ | पालवी, अंकुर |
| ನೆಲೆ | बैठक |
| ಚೌಕ | स्वयंपाक घर |
| ಸ್ನೇಹ | तेल |
| ಕುಗ್ಗು | ओसरणे |
| ಓದು | वाचन, अभ्यास |
| ನಂದದಿದ್ದರೂ | जरी विझला नाही तरी |
| ಕುಂದು | कमी होणे |
| ಬೀಸು | ( वारा ) वाहणे |
| ಆರಿಹೋಗು | विझणे |
| ಕತ್ತಲು | काळोख |



## धडा २७ वा                    ಇಪ್ಪತ್ತೇಳನೆಯ ಪಾಠ

### ವೃತ್ತಲೇಖನ (Reportage)

### ಕರ್ನಾಟಕ ಸಂಘ ಕಾಶೀ ವಿಶ್ವವಿದ್ಯಾಲಯ

ಕರ್ನಾಟಕ ಸಂಘವು ಈ ವರ್ಷ (೧೯೩೩·೩೪) ಮಾಡಿದ ಕಾರ್ಯಕಲಾಪಗಳ ವರದಿಯನ್ನು ನಾಡಿಗರ ಮುಂದಿಡಿಸುವುದಕ್ಕೆ ನಮ್ಮಲ್ಲೊಂದು ತರದ ಉತ್ಸಾಹ. ಕಳೆದ ವರ್ಷಕ್ಕಿಂತ ಈ ವರ್ಷ ವಿಶ್ವವಿದ್ಯಾಲಯದಲ್ಲಿ ಕನ್ನಡಿಗ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದೆ. ಮಂಗಳೂರು, ಮೈಸೂರು, ಧಾರವಾಡ, ಬಳ್ಳಾರಿ, ಬೆಳಗಾಂವಿ, ಅನಂತಪುರ, ಕೋಲಾರ ಮುಂತಾದ ವಿವಿಧ ಪ್ರಾಂತ್ಯಗಳಿಂದ ಬಂದ ವಿದ್ಯಾರ್ಥಿಗಳ ಸಂಖ್ಯೆಯು ಎಪ್ಪತ್ತಕ್ಕೆ ಮೀರಿದೆ. ಇದು ನಾಡ ಯುವಕರ ಮುಂದುವರಿವ ಹುರುಪನ್ನು ತೋರಿಸುತ್ತದೆ.

ಈ ವರ್ಷವೂ ಸಂಘವು ಆರು ಸಭೆಗಳನ್ನೇರ್ಪಡಿಸಿತು. ಸಾಧ್ಯವಾದ ಹಾಗೆ ವಿದ್ವಾಂಸರನ್ನೂ, ಗಾಯಕರನ್ನೂ ಕರೆಸಿ ಸಾಹಿತ್ಯ ಕಲಾ ಸೇವೆಯನ್ನು ಶಕ್ತಿಗೆ ನಿಲುಕುವಷ್ಟು ಮಾಡಿತು. ಮೊದಲನೆಯ ಸಭೆಯು ಜೂಲೈ ತಿಂಗಳ ಅಂತ್ಯದಲ್ಲಿ ಡಾ॥ ದಾಸಣ್ಣಾಚಾರ್ಯರ ಮನೆಯಲ್ಲಿ ಜರುಗಿ, ಈ ಕೆಳಗಿನ ಪ್ರಕಾರ ಚುನಾವಣೆಯಾಯಿತು.

ಅಧ್ಯಕ್ಷರು - ಡಾ॥ ದಾಸಣ್ಣಾಚಾರ್ಯ ಎಂ. ಎ. ಪಿ. ಎಚ್. ಡಿ.
ಎಫ್. ಇಸ್ಸ್. ಎಸ್. ಡಿ.

ಉಪಾಧ್ಯಕ್ಷರು - ಪ್ರೊ. ವಾಮನ ಭಟ್ ಬಿ. ಎಸ್. ಸಿ.

ಕಾರ್ಯದರ್ಶಿಗಳು - ಶ್ರೀಮಾನ್ ಪೇಜಾವರ ಸದಾಶಿವರಾಯರು
,, ಎಸ್. ಜಗದೀಶನ್
,, ಕೆ. ನಾರಾಯಣ ಪೈ

ಇವರು ಮಾತ್ರವಲ್ಲದೆ ಹನ್ನೆರಡು ಮಂದಿಯದೊಂದು ಸಹಾಯಕ ಸಮಿತಿಯೂ ನೇಮಕವಾಯಿತು. ಡಾ॥ ದಾಸಣ್ಣಾಚಾರ್ಯರು ಅಂದಿನ

ಅಧ್ಯಕ್ಷರು ಮಾತ್ರವಲ್ಲದೆ ನಮಗೆ ಅತಿಥ್ಯವಿತ್ತ ಗೃಹಪತಿಗಳೂ ಆಗಿದ್ದರು.

ಎರಡನೆಯ ಸಭೆಯಲ್ಲಿ ಹೊಸ ಸದಸ್ಯರ ಪರಿಚಯವಾದ ಮೇಲೆ ಜೊಂಬಾಯಲ್ಲಿ ಈಗ ತಾನೆ ನಿರ್ಮಾಣವಾದ ಕರ್ನಾಟಕ ಸಂಘದ ಹಿತಚಿಂತನೆಯನ್ನು ಮಾಡಿದೆವು. ಈ ಸಂದರ್ಭದಲ್ಲಿ ಡಾ॥ ಗೋಡಬೋಲೆ ಯವರು ಕರ್ನಾಟಕ ಏಕೀಕರಣದ ವಿಚಾರವಾಗಿ ಸರಸವಾಗಿ ಭಾಷಣ ಮಾಡಿದರು. ಮೂರನೆಯ ಸಭೆಯ ಕಾರ್ಯಕ್ರಮವಾಗಿ ಸಂಘವು ಕಾಲ್ನಡಿಗೆಯಿಂದಲೇ ಪಂಚಕ್ರೋರಿಯ ಕಡೆ ಐದಾರು ಮೈಲು ನಡೆದು ಮುಂಜಾನೆಯಿಂದ ಸಂಜೆಯ ವರೆಗೆ ಬಯಲಿನಲ್ಲಿ ಕಳೆಯಿತು. ಬೆಳಿಗ್ಗೆ ಅಧ್ಯಕ್ಷರ ಮನೆಯಿಂದ ಶಂಖ ಜಾಂಗಟೆಗಳೊಂದಿಗೆ ಹೊರಟೆವು. ಹಳ್ಳಿ ಗಳ ನಡುವೆ ಹಾದು ಹೋಗಿ ಮಧ್ಯಾಹ್ನ ದಾರಿಯಲ್ಲಿ ಸಿಕ್ಕಿದ ಮಾವಿನ ತೋಪಿನಲ್ಲಿ ಇಳಿದು ಸಂಜೆ ಆರು ಗಂಟೆಗೆ ವಿಶ್ವವಿದ್ಯಾಲಯವನ್ನು ಮುಟ್ಟಿ ದೆವು. ನಾಲ್ಕನೆಯ ಸಭೆಯು ಫಿಸಿಕ್ಸ್ ಥಿಯೆಟರಿನಲ್ಲಾಯಿತು. ಮೈಸೂರಿನ ಆಸ್ಥಾನ ವಿದ್ವಾನರಾದ ಶ್ರೀಮಾನ್ ಶಿವರುದ್ರಪ್ಪನವರು ತಮ್ಮ ಪಿಟೀಲಿ ನಲ್ಲಿ ಅಮೋಘವಾದ ವಾದನವನ್ನು ಕೊಟ್ಟರು. ಶ್ರೀಯುತರು ಹುಟ್ಟು ಗುರುಡರಾಗಿದ್ದರಿಂದ ಅವರ ಕಲೆಗೆ ಅವರದೇ ಆದ ಒಂದು ಮೆರುಗಿದ್ದಿತು' ಐದನೆಯ ಸಭೆಯು ರಾಜಪುತಾನ ಹೊಸ್ಟೆಲಿನಲ್ಲಿ ಡಾ॥ ಗೋಡಬೋಲೆ ಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಮಂಗಳೂರಿನ ಪ್ರಸಿದ್ಧ ಸಾಹಿತಿ ಗಳೂ, ನಾಟಕಕಾರರೂ, ನಟರೂ ಆದ ಶ್ರೀಮಾನ್ ಕೋಟೆ ಶಿವರಾಮ ಕಾರಂತರು "ಭಾರತೀಯ ರಂಗಭೂಮಿ"ಯ ವಿಷಯವಾಗಿ ಎರಡು ಗಂಟೆಗಳ ಕಾಲ ಸರಸೋಜ್ವಲವಾದ ಭಾಷಣವನ್ನು ಮಾಡಿದರು. ಡಾ॥ ಗೋಡಬೋಲೆಯವರೂ ಪಾಶ್ಚಾತ್ಯ ನಾಟಕ ಕಲೆಯ ವಿಚಾರವಾಗಿ ನಾಲ್ಕು ಮಾತು ಹೇಳಿದರು. ಆರನೆಯ ಸಭೆಯು ರಾಜಪುತಾನದ ಉಪ್ಪ ರಿಗೆಯ ಮೇಲೆ ನಡೆಯಿತು. ಶ್ರೀಮಾನ್ ಕಾರಂತರೇ ಒಂದುವರೆ ಗಂಟೆಯ ಕಾಲ ತಮ್ಮ ನಟನೆಯಿಂದ, ಹಾಡುಗಳಿಂದ, ಕಥೆಗಳಿಂದ ನಾಟಕದ ಹಲವು ಭಾಗಗಳಿಂದ ಸಭಿಕರ ಮನೋರಂಜನೆಯನ್ನು ಮಾಡಿ ದರು. ಶ್ರೀಮಾನ್ ಕಾರಂತರು ಹಿಂದುಸ್ಥಾನ ಸಂಚಾರಿಗಳಾಗಿ ಅವಸರ

ವಾಗಿಯೇ ಇಲ್ಲಿಂದ ಹೊರಟು ಹೋಗದಿದ್ದರೆ ನಮಗೆ ಒಂದು ನಾಟಕವನ್ನು ಅವರ ನೆರವಿನಿಂದ ಆಡಬೇಕೆಂಬ ಆಸೆಯಿತ್ತು.

ಕೊನೆಯದಾಗಿ ನವಂಬರ ತಿಂಗಳ ಕೊನೆಯ ವಾರದಲ್ಲಿ ಸಂಘದ ವಾರ್ಷಿಕೋತ್ಸವವು ಬಹಳ ವಿಜೃಂಭಣೆಯಿಂದ ನಡೆಯಿತು. ಮೊದಲನೆಯ ದಿನ ಮಧ್ಯಾಹ್ನ ಸಂಘದ ಸದಸ್ಯರೊಳಗೊಂಡು ಕ್ರಿಕೆಟ್ ಪಂದ್ಯಾಟವಾಯಿತು. ಆಟವನ್ನು ನೋಡುವುದಕ್ಕೆ ವಿಶ್ವವಿದ್ಯಾಲಯದ ಇತರ ಪ್ರೊಫೆಸರುಗಳು ಹಲವರು ಬಂದಿದ್ದರು. ಡಾ॥ ಗೋಡಬೋಲೆಯವರ ಪಕ್ಷವು ಚೆನ್ನಾಗಿಯೇ ಆಡಿದ್ದರೂ ಡಾ॥ ದಾಸಣ್ಣಾಚಾರ್ಯರ ಪಕ್ಷವು ಜಯಶಾಲಿಯಾಯಿತು.

[ पेजावर सदाशिवराव यांनी लिहिलेला हा काशी विश्वविद्यालयातील कर्नाटक संघाचा १९३३–३४ सालचा अहवाल आहे. ]

## कठीण शब्द आणि कल्पना

| | |
|---|---|
| ವರದಿ | अहवाल |
| ನಾಡಿಗರು | देशबांधव |
| ಮುಂದಿರಿಸು | सादर करणे |
| ತರ | प्रकार |
| ಪ್ರಾಂತ್ಯ | प्रांत |
| ಮೀರು | अधिक होणे |
| ನಾಡು | देश |
| ಮುಂದುವರಿವ | प्रगती साधण्यासाठी |
| ಹುರುಪು | उत्साह, हुरूप |
| ಏರ್ಪಡಿಸು | व्यवस्था करणे |
| ನಿಲುಕು | हात पोहोचणे, हातास लागणे |
| ಜರುಗು | भरणे |
| ಚುನಾವಣೆ | निवडणूक |
| ನೇಮಕ | स्थापना |
| ಸರಸವಾಗಿ | सुरेख |

| | |
|---|---|
| ಕಾರ್ಯಕ್ರಮವಾಗಿ | कार्यक्रम या नात्याने |
| ಕಾಲ್ನಡಿಗೆ | पायी चालणे |
| ಕಳೆ | ( वेळ ) घालविणे |
| ಶಂಖಜಾಂಗಟೆ | शंख आणि घंटा |
| ಹಾದು ( ಹಾಯ್ದು ) | आतून जावून |
| ಮುಟ್ಟು | पोहोचणे, शिवणे |
| ಪಿಟೀಲು | व्हायोलीन |
| ಹುಟ್ಟುಕುರುಡ | जन्मतः नेत्रहीन |
| ಮೆರುಗು | शोभा |
| ಉಪ್ಪರಿಗೆ | गच्ची |
| ನಟನೆ | अभिनय |
| ಹಾಡು | गाणे |
| ಅವಸರವಾಗಿ | बाईने |
| ನೆರವು | सहाय्य |
| ಆಡು | ( नाटक ) बसविणे, खेळणे |
| ವಿಜೃಂಭಣೆ | थाट |
| ಪಂದ್ಯಾಟ | कसोटी शर्यत |
| ಆಟ | खेळ |



# धडा २८ वा          ಇಪ್ಪತ್ತೆಂಟನೆಯ ಪಾಠ

**ಕತೆ**

ಮೈಸೂರು ಮಂಜಣ್ಣ ಒಬ್ಬ ಜಮೀನುದಾರರ ಒಕ್ಕಲು. ಅವನಿಗೆ ಇದ್ದಕ್ಕಿದ್ದ ಹಾಗೆ ಶ್ರೀಮಂತನಾಗಬೇಕೆಂಬ ಹುಚ್ಚು ಹಿಡಿಯಿತು. ಹೆಚ್ಚು ಗದ್ದೆ ಸಾಗುವಳಿ ಮಾಡತೊಡಗಿದನು. ಒಂದು ಸಣ್ಣ ಅಡಕೆ ತೋಟವನ್ನು ಗುತ್ತಿಗೆಗೆ ತೆಗೆದುಕೊಂಡನು. ದೂರದ ಹಳ್ಳಿಯ ಜಾನುವಾರುಗಳು ತನ್ನ ಗದ್ದೆ ತೋಟಗಳಿಗೆ ಬಂದಾಗ ಅವುಗಳನ್ನು ಹಿಡಿದು ಕಿವಿ ಬಾಲಗಳನ್ನು ಕೊಯ್ದು ಚಹರೆ ತಪ್ಪಿಸಿ ತನ್ನ ಕೊಟ್ಟಿಗೆಗೆ ಕೂಡಿಕೊಂಡನು. ನೆರೆಯುವರ ಗದ್ದೆಗಳಿಂದ ಹಾರೆ, ಗುದ್ದಲಿ ಮೊದಲಾದ ಹತಾರುಗಳನ್ನು ಕದ್ದು ತಂದನು. ಕಾಸಿಗೆ ಕಾಸು ಗಂಟುಹಾಕಿ, ಹೊಟ್ಟೆಗೆ ಬೆನ್ನು ಅಂಟು ಹಾಕಿ ಅಂತೂ ಸ್ವಲ್ಪ ದುಡ್ಡು ಮಾಡಿಕೊಂಡನು. ಸಗಣಿ, ಕೆಸರು ಹಿಡಿದು ಜಿಡ್ಡು ಜಿಡ್ಡಾದ ಅಂಗಿ, 'ಪಂಚೆ' ಟೋಪಿಗಳನ್ನೇ ಹರಿದು ಚಿಂದಿ ಚಿಂದಿಯಾಗುವವರೆಗೂ ಉಡತೊಡಗಿದನು. ಹೆಂಡತಿಗೆ 'ಮಿತವ್ಯಯ'ವನ್ನು ಕಲಿಸತೊಡಗಿದನು. ಆದರೆ ಅದು ಸಾಗಲಿಲ್ಲ. ಆಕೆಯ ಕಾಟ ಸಹಿಸಲಾರದೆ ಕೆಲವು ಆಭರಣಗಳನ್ನೇನೋ ಮಾಡಿಸಿಕೊಟ್ಟನು. ಹೀಗಾಗಿ ಕೆಲವು ವರುಷಗಳಲ್ಲಿಯೇ ನಿರಂತರ ಶ್ರಮಯಾತನೆಗಳಿಂದ ಮೈಸೂರು ಮಂಜಣ್ಣನು ಮೈಸೂರು ಮಂಜಣ್ಣ ಗೌಡರಾದನು. ಅನೇಕರು ಅವನನ್ನು ಮಂಜಣ್ಣ ಗೌಡರೇ ಎಂದು ಕರೆಯಲಾರಂಭಿಸಿದರು. ಮಂಜಣ್ಣನಿಗೆ ಪಿತ್ತ ನೆತ್ತಿಗೇರಿ ಇನ್ನೂ ಹೆಚ್ಚಾಗಿ ಐಶ್ವರ್ಯ ಸಂಪಾದನೆ ಮಾಡಬೇಕೆಂದು ಕಾತರನಾದನು. ಮಾರ್ಗ? ಮಂಜಣ್ಣನು ಹಗಲಿರುಳು ಐಶ್ವರ್ಯ ಸಂಪಾದನೆಮಾಡುವ ಚಿಂತೆಗೊಳಗಾಗಿ ಭೂತಗಳಿಗೂ, ದೇವತೆಗಳಿಗೂ ವಿಧವಿಧವಾದ ಕಾಣಿಕೆ ಕಟ್ಟಿ ಪ್ರಾರ್ಥಿಸುತ್ತಿದ್ದನು. ಪುರಾಣ ಭಾಗವತರಾಟಗಳಲ್ಲಿ ಆಕಸ್ಮಿಕವಾದ ಈಶ್ವರ ಕೃಪೆಯಿಂದ ಸಂಪತ್ತು ಲಭಿಸುತ್ತದೆ ಎಂಬುದನ್ನು ಕೇಳಿನಂಬಿದ್ದ ಆತನು ಯಾವುದಾದರೊಂದು ಅದ್ಭುತ ರೀತಿಯಿಂದ ತಾನು ಶ್ರೀಮಂತನಾಗುತ್ತೇನೆ ಎಂದು ದಿನದಿನವೂ ಆ ಮಹಾಮುಹೂರ್ತವನ್ನೇ ನಿರೀಕ್ಷಿಸ ತೊಡಗಿದನು.

ಅಘಟಿನ ಘಟನಾಕಾರಿಯಾದ ದೇವರ ಕೃಪೆಯಿಂದ ತನ್ನ ಪೆಟ್ಟಿಗೆಯಲ್ಲಿದ್ದ ರೂಪಾಯಿಗಳು ಮರಿ ಹಾಕಬಹುದೆಂದು ದಿನವೂ ಅವುಗಳನ್ನು ಎಣಿಸಿ ಎಣಿಸಿ ನೋಡಿದನು. ಚೊಕ್ಕ ಚೊಕ್ಕವಾದುವೇ ಹೊರತು ಲೆಕ್ಕ ಹೆಚ್ಚಾಗಲಿಲ್ಲ. ಯಾವುದಾದರೂ ಒಂದು ದೇವತೆಯು ತನ್ನ ಭಕ್ತಿಗೆ ಮೆಚ್ಚಿ ಹಣದ ಗಂಟನ್ನು ತಂದು ತನ್ನ ಮನೆಯೊಳಗೆ ಹಾಕಬಹುದೆಂದು ದಿನದಿನವೂ ಮನೆಯ ಮೂಲೆ ಮೂಲೆಗಳನ್ನು ಹುಡುಕಿ ನೋಡಿದನು. ಕಸಕಡ್ಡಿ ಕೃಮಿ ಕೀಟಕಗಳೇ ಕಾಣುತ್ತಿದ್ದುವೇ ಹೊರತು ಗಂಟು ಕಾಣಿಸಲಿಲ್ಲ. ನೆಲದಲ್ಲಿ ಎಲ್ಲಿಯಾದರೂ ಗಂಟು ದೊರಕ ಬಹುದೆಂದು ಭಾವಿಸಿ ನಡೆಯುವಾಗ ಧಪ್ಪಧಪ್ಪನೇ ಕಾಲು ಹಾಕಿ ಹಣದ ಸದ್ದಾಗುವುದೋ ಎಂದು ಆಲಿಸಿ ನೋಡಿದನು. ಪರಿಣಾಮವಾಗಿ ಕಾಲು ಕೀಲುಗಳು ನೊಂದು ಸ್ವಲ್ಪ ನರಳಿದನೇ ಹೊರತು ಎಲ್ಲಿಯೂ ಗುಪ್ತ ಧನ ವಿಟ್ಟ ತಾಣವು ಸಿಕ್ಕಲಿಲ್ಲ.

ಹೀಗಿರಲು ಒಂದು ದಿನ ಮಂಜಣ್ಣನು ತನ್ನ ತೋಟದಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿದ್ದ ಒಂದು ಹಲಸಿನ ಮರದಲ್ಲಿ ಒಂದು ಕೈ ಮೂಡಿದ್ದನ್ನು ಕಂಡನು. ಲಕ್ಷ್ಮೀ ಸಮೇತನಾದ ಶ್ರೀಮನ್ ನಾರಾಯಣನೇ ಪ್ರತ್ಯಕ್ಷನಾಗಿದ್ದರೂ ಮಂಜಣ್ಣನಿಗೆ ಅಷ್ಟು ಆನಂದವು ಆಗುತ್ತಿತ್ತೋ ಇಲ್ಲವೋ! ತನ್ನ ಅದೃಷ್ಟ ಕುಲಾಯಿಸಿತೆಂದು ಹಿಗ್ಗಿ ಹೆಬ್ಬಾಗಿಲಾದನು. ಆ ಮರಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ ಆ ತೋಟದ ಭೂತನಿಗೆ ಹತ್ತಾರು ಕೋಳಿಗಳನ್ನು ಹೆಚ್ಚಾಗಿ ಹರಕೆ ಕೊಡುವುದಾಗಿ ಹೇಳಿಕೊಂಡು ಮನೆಗೆ ಬಂದನು. ಗುಟ್ಟನ್ನು ಯಾರಿಗೂ ಹೇಳಲಿಲ್ಲ. ಹೆಂಡತಿಗೆ ಹೇಳಿದರೂ ಕೂಡ ಸುದ್ದಿ ಬಯಲಾಗುತ್ತದೆಂದು ಭಯ. ತಾನೊಬ್ಬನೇ ಗಂಟು ಕೀಳಬೇಕೆಂದು ನಿಶ್ಚಯಿಸಿದನು.

ಆದರೆ ಮಂಜಣ್ಣನಿಗೆ ಐಶ್ವರ್ಯದಲ್ಲಿ ಆಸೆ ಇದ್ದುದಕ್ಕಿಂತಲೂ ಹೆಚ್ಚಾಗಿ ಭೂತ ಪಿಶಾಚಿಗಳಲ್ಲಿ ನಂಬಿಕೆಯೂ ಭಯವೂ ಇದ್ದುವು. ಸರಿಯಾದ ಮಂತ್ರವಾದಿಗಳ ಸಹಾಯವಿಲ್ಲದೆ ಭೂತಾದಿಗಳಿಗೆ ತೃಪ್ತಿಯಾಗುವಂತೆ ಬಲಿಕೊಟ್ಟು ದಿಗ್ಬಂಧನ ಮಾಡದೆ ಗಂಟು ಕಿತ್ತರೆ ಚಿತ್ರ ವಿಚಿತ್ರ ಹಿಂಸೆಗಳಿಂದ ಪ್ರಾಣಹೋಗುತ್ತದೆಂದು ಆತನು ಕೇಳಿದ್ದನು. ದೆವ್ವಗಳನ್ನು

ಲಕ್ಷಿಸದೆ ಗಂಟು ಕಿತ್ತ ಒಬ್ಬನು ಅದೇ ಮರಕ್ಕೆ ನೇಣಾಗಿದ್ದನಂತೆ. ಇನ್ನೊಬ್ಬನು ರಕ್ತಕಾರಿ ಸತ್ತನಂತೆ. ಮತ್ತೊಬ್ಬನಿಗೆ ಹುಚ್ಚು ಹಿಡಿಯಿತಂತೆ. ಮಗುದೊಬ್ಬನು ತನ್ನ ಆಹಾರದಲ್ಲಿ ಸದಾ ಕ್ರಿಮಿ ಕೀಟಾದಿ ಅಸಹ್ಯಗಳನ್ನೇ ಕಾಣತೊಡಗಿದನಂತೆ. ಇದನ್ನೆಲ್ಲಾ ಕೇಳಿದ್ದ ಅವನು ತಾನೊಬ್ಬನೇ ಗಂಟು ಕೀಳಲು ಸಾಹಸಮಾಡಲಿಲ್ಲ. ಯಾರಾದರೂ ಒಬ್ಬ ಮಂತ್ರವಾದಿಯು ತನ್ನೂರಿಗೆ ಬರುವುದನ್ನೇ ನಿರೀಕ್ಷಿಸುತ್ತಿದ್ದನು.

ಈ ಮಧ್ಯೆ ಮಂಜಣ್ಣನು ಸ್ವಲ್ಪ ಧಾರಾಳವಾಗಿ ವೆಚ್ಚಮಾಡತೊಡಗಿದನು. ಏಕೆಂದರೆ ತೋಟದಲ್ಲಿ ಹಲಸಿನ ಮರದ ಬುಡದಲ್ಲಿ ಬ್ಯಾಂಕ್ ಇದೆಯಷ್ಟೇ! ಇನ್ನೇಕೆ ಕಾರ್ಪಣ್ಯ! ಭೂತ ಪಿಶಾಚಿಗಳಿಗೂ ಹೆಚ್ಚು ಹೆಚ್ಚಾಗಿ ಕೋಳಿ ಕುರಿಗಳನ್ನು ಬಲಿ ಕೊಡತೊಡಗಿದನು. ಪ್ರತಿದಿನವೂ ಹಲಸಿನ ಮರದ ಬುಡದಲ್ಲಿ ಕುಳಿತು ಹೊಂಗನಸುಗಳನ್ನು ನಿರ್ಮಿಸಿ ಆನಂದಪಡುವನು. ಮಂತ್ರವಾದಿಯ ಆಗಮನಕ್ಕೆ ಪ್ರಾರ್ಥಿಸುವನು.

ಹೀಗಿರುತ್ತಿರಲು ಮಂಜಣ್ಣನ ಕಿವಿಗೆ ಒಂದು ಸುದ್ದಿಬಿದ್ದಿತು. ನೆರೆಯೂರಿನಲ್ಲಿ ಅದ್ಭುತ ಶಕ್ತಿಯುಳ್ಳ ಬೈರಾಗಿಯೊಬ್ಬನು ಬಂದಿದ್ದಾನೆ ಎಂದು ಮಂಜಣ್ಣನು ತನ್ನ ಗುಟ್ಟನ್ನು ಅವನೊಡನೆ ಹೇಳಿ ಹೇಗಾದರೂ ಮಾಡಿ ಆ ಗುಪ್ತ ಧನವನ್ನು ತನ್ನ ಕೈವಶಮಾಡಬೇಕೆಂದು ಕೇಳಿಕೊಂಡನು. ಬೈರಾಗಿಯೂ ಸುಸಮಯ ಸಿಕ್ಕಿತೆಂದು ಒಪ್ಪಿಕೊಂಡನು.

ನಡುರಾತ್ರಿ ಇಬ್ಬರೂ ಹಲಸಿನ ಮರದ ಬುಡವನ್ನು ಸೇರಿದರು. ಮಂಜಣ್ಣನು ಬೈರಾಗಿಯ ನೇತೃತ್ವದಲ್ಲಿ ಸ್ಥಳವನ್ನು ಅಗಿಯತೊಡಗಿದನು. ಬೈರಾಗಿಯು ಕುಂಕುಮ ಹೂವುಗಳಿಂದ ಮುಚ್ಚಿ ಹೋಗಿದ್ದ ಸಣ್ಣ ಕೊಡ ಒಂದನ್ನು ಮೇಲಕ್ಕೆ ಎತ್ತಿಟ್ಟನು. ಸ್ವರ್ಗವೇ ಬಾಗಿಲು ತೆರೆದಂತಾಗಿ ಮಂಜಣ್ಣನು ಅತ್ಯಾನಂದದಿಂದ ಓಡಿಹೋಗಿ ಆ ಕೊಡವನ್ನು ತಬ್ಬಿಕೊಳ್ಳಲು ಮುಂದೆ ನುಗ್ಗಿದನು. ಆದರೆ ಬೈರಾಗಿಯು ಅಧಿಕಾರಯುಕ್ತವಾದ ಅಂಗಭಂಗಿಯಿಂದ ಅವನನ್ನು ತಡೆದನು. ಸ್ವಲ್ಪ ಹೊತ್ತಿನಲ್ಲಿಯೇ ಬೈರಾಗಿಯು ಕೊಡವನ್ನು ಹೊತ್ತು ತಂದು ಮಂಜಣ್ಣನ ಮನೆಯ ಒಂದು ಕೋಣೆಯಲ್ಲಿ ತಾನು ಹೇಳಿದಂತೆ ಪ್ರತಿಷ್ಠೆ ಮಾಡಿದನು.

ಸರಿ, ದಿನದಿನವೂ ಪೂಜೆ ಔತಣಗಳಿಗೆ ಷುರುವಾಯಿತು. ಮಂಜಣ್ಣನಂತೂ ಮುಕ್ತಹಸ್ತನಾಗಿ ಖರ್ಚುಮಾಡಿದನು. ಆ ಕೊಡವನ್ನು ಸಿಂಗರಿಸಲು ತನ್ನ ಮನೆಯಲ್ಲಿದ್ದ ಆಭರಣಗಳನ್ನು ಎರವಾಗಿ ತಂದ ನೆರೆಯವರ ಆಭರಣಗಳನ್ನೂ ತನ್ನ ಹೆಂಡತಿಯ ಮೈಮೇಲಿದ್ದ ತಾಳಿಯೊಂದುಳಿದು ಎಲ್ಲ ಒಡವೆಗಳನ್ನೂ ಬೈರಾಗಿಯು ಕೇಳಿದಂತೆಲ್ಲ ಕೊಟ್ಟನು.

ಹೀಗೆ ಹದಿನೈದು ಇಪ್ಪತ್ತು ದಿನಗಳು ಸಾಗಿದುವು. ಒಂದು ದಿನ ಪ್ರಾತಃಕಾಲ ಇದ್ದಕ್ಕಿದ್ದ ಹಾಗೆ ಮಂಜಣ್ಣನ ಮನೆಯಿಂದ ರೋದನದ ಬೊಬ್ಬೆ ಕೇಳಿಸಿತು. ನೆರೆಯವರು ಗಾಬರಿಗೊಂಡು ಓಡಿಹೋಗಿ ನೋಡಲು ಮಂಜಣ್ಣನೂ ಅವನ ಹೆಂಡತಿಯೂ ಬಾಯಿ ಬಾಯಿ ಎದೆ ಎದೆ ಬಡಕೊಂಡು ಗಟ್ಟಿಯಾಗಿ ಗೋಳಿಡುತ್ತಿದ್ದರು. ನೆಲದ ಮೇಲೆ ಬಾಯಿ ತೆರೆದು ಕಲ್ಲು ಮಣ್ಣು ತುಂಬಿದ ಕೊಡವೊಂದು ಬಿದ್ದಿತ್ತು. ಬೈರಾಗಿಯು ಅಲ್ಲಿರಲಿಲ್ಲ. ತಾನು ಕೊಪ್ಪಕ್ಕೆ ಹೋಗಿ ಕಲ್ಲು ಮಣ್ಣು ತುಂಬಿ ಜೆಸುಗೆ ಹಾಕಿಸಿಕೊಂಡು ಬಂದಿದ್ದ ಕೊಡವನ್ನು ಮಂಜಣ್ಣನಿಗೆ ಬಿಟ್ಟು ಅದಕ್ಕೆ ಪ್ರತಿಯಾಗಿ ಮಂಜಣ್ಣನು ಪೂಜೆಗಾಗಿ ಕೊಟ್ಟಿದ್ದ ಒಡವೆ ಹಣ ಎಲ್ಲವನ್ನೂ ದೋಚಿಕೊಂಡು ರಾತ್ರಿಯೇ ಪರಾರಿಯಾಗಿದ್ದನು.

( के. व्ही. पुट्टप्पा 'कुवेंपु' यांच्या "गंटु अथवा गुप्तधन" या लघुकथेचे संक्षिप्त रूप )

## कठीण शब्द व वाक्यें

| | |
|---|---|
| ಒಕ್ಕಲು | रयत, कूळ |
| ಗದ್ದೆ | भातशेती |
| ಸಾಗುವಳಿ ಮಾಡ ತೊಡಗಿದನು | शेत नांगरू लागला |
| ಅಡಕೆ | सुपारी |
| ಗುತ್ತಿಗೆ | कंत्राट |
| ಜಾನುವಾರು | गुरे |
| ಕಿವಿ-ಬಾಲ | कान, शेपूट |
| ಚಹರೆ ತಪ್ಪಿಸಿ | चेहरा, स्वरूप बदलून ( बिघडवून ) |
| ಕೊಟ್ಟಿಗೆ ಕೂಡಿಕೊಂಡನು | कोठी गवाणीत जमा केले |

| | |
|---|---|
| ನೆರೆಯುವರು | शेजारी |
| ಹಾರೆ | पहार, फावडा |
| ಗುದ್ದಲಿ | कुदळ |
| ಕದ್ದು | चोरून |
| ಗಂಟು ಹಾಕಿ | जमा करून |
| ಹೊಟ್ಟೆಗೆ ಬೆನ್ನು ಅಂಟು ಹಾಕಿ | पोटाला पाठ लागली ( क्षीण झाला ) |
| ದುಡ್ಡು | पैसा |
| ಸಗಣಿ | शेण |
| ಕೆಸರು | चिखल |
| ಉಡು | नेसणे, वापरणे |
| ಸಾಗು | चालणे |
| ಕಾಟ | त्रास |
| ಪಿತ್ತನೆತ್ತಿಗೇರಿ | गर्व चढ़न |
| ಕಾತರ | आतुर |
| ಕಾಣಿಕೆ ಕಟ್ಟಿ | नवस करून |
| ಭಾಗವತರಾಟ | खेड्यांतील लोकनाट्य |
| ಮರಿಹಾಕು | विणे |
| ಲೆಕ್ಕ | हिशेब |
| ಚೊಕ್ಕ | बरोबर |
| ಕಡ್ಡಿ | काडी |
| ಗಂಟು | गाठोडे, धन |
| ಸದ್ದು | आवाज |
| ಆಲಿಸಿ | लक्ष पूर्वक |
| ಕಾಲುಕೀಲು | पायाचे सांधे |
| ತಾಣ | ठिकाण |
| ಹಲಸು | फणस |
| ಮೂಡು | उमटणे |
| ಕುಲಾಯಿಸು | ( दैव ) उघडणे |
| ಹರಕೆ | नवस |
| ಗುಟ್ಟು | रहस्य, मर्म |
| ಹಿಗ್ಗಿ ಹೆಬ್ಬಾಗಿಲಾದನು | आनंदाने फुगून वेशीच्या दारा एवढा झाला |

| | |
|---|---|
| ನಂಬಿಕೆ | श्रद्धा |
| ದಿಗ್ಬಂಧನ | शांती |
| ನೇಣಾಗು | चिकटणे |
| ರಕ್ತಕಾರು | रक्त ओकणे |
| ಮಗುದೊಬ್ಬ | तिसऱ्या एका माणसाला |
| ಅಸಹ್ಯ | घाण |
| ಧಾರಾಳವಾಗಿ | खूप |
| ಕಾರ್ಪಣ್ಯ | चिक्कूपणा |
| ಹೊಂಗನಸು (ಹೊನ್ನು + ಕನಸು) | सोनेरी स्वप्न |
| ಸುದ್ದಿ | बातमी |
| ಅಗಿ | खोदणे |
| ಕೊಡ | घागर |
| ತಬ್ಬಿಕೊಳ್ಳು | मिठी मारणे |
| ಅಂಗಭಂಗಿ | हातवारे |
| ತಡೆ | रोखून धरणे |
| ಔತಣ | आमंत्रण |
| ಎರವಾಗಿ | गहाणवट |
| ಒಡವೆ | दागिने |
| ಬೊಬ್ಬೆ | बॉंब |
| ಬೆಸುಗೆ | सांधणे |
| ದೋಚಿಕೊಂಡು | गिळंकृत करून |



## ಧಡಾ ೨೯ ವಾ ಇಪ್ಪತ್ತೊಂಬತ್ತನೆಯ ಪಾಠ

**ನಾಡಹಾಡು**

### ಎಂಥ ನಾಡು

ಎಂಥ ನಾಡಿದು ಎಂಥ ಕಾಡಾಯಿತೋ!
ಹುಲುಸಾದ ಬೆಳೆ ಹೋಗಿ ಹುಲ್ಲು ಕೊಳೆ ತುಂಬಿಹುದೋ
ಹಗೆಯು ಹೆಸರನು ಕೇಳಿ ಹುಲಿಯಂತೆ ಹಸುಗೂಸು
ನೆಗೆದು ತೊಟ್ಟಿಲ ತುಳಿದು ಮೆಟ್ಟುತಿಹ ನಾಡಿನಲಿ
ಹಗೆಯು ಊಳಿಗಗೊಂಡು ನಾಯಿಬಾಳುಗಳೀಗ
ಬಗೆಬಗೆಯು ಬಾಯ್ತೆರೆದು ಹೇಡಿನುಡಿ ಬೊಗಳುತಿಹವೊ
ನೂರು ರಾಜ್ಯವ ಕಟ್ಟಿ ಬಾನು ಛತ್ರವ ಹಿಡಿದು
ಸಾರಿ ಬನ್ನಿರಿ ಸರುವ ಜನ ಮನವೆ ಮತಗಳೇ
ಸಾರಿ ಈ ಪರಿಬಾಳ್ದ ಸೀಮೆಯಲಿ ಇದುವೀಗ
ಹರಿದು ಹಂಚುವ ಕಲಹ ಕುಲದೈವವಾಗಿಹುದು.

ಇಲ್ಲಿಯೇ ಈಸುವುದು, ಇದ್ದು ಜೈಸುವುದೆಂಬ
ಎಲ್ಲರೊಡೆಯನ ನಂಬಿ ನಡೆವುದು ಎಂಬ ಆ
ಸೊಲ್ಲೀಗ ಗಾಳಿಯುಯ್ಯಾಲೆಯಲ್ಲಿ ತೂಗುತಿರೆ
ಒಲ್ಲೆ ಬಾಳನು ಎಂಬ ಗೋಳುಗಳು ಕೇಳುತಿಹವೊ?
ನೆಲದ ಒಳಉರಿಯೆದ್ದು ತೂರಿರುವ ಮೊರಟಾದ
ಶಿಲೆಯು ಸಾವಿರದಿ ಗುಡಿ ಬಸದಿ ರಥ ಗೊಮ್ಮಟದ
ಚೆಲುವು ನನೆಕೊನೆಯಾಗಿ ನಿಲ್ಲಿಸಿದ ನಾಡಿನಲಿ
ಚೆಲುವು, ಕಲೆ, ಹಾಡು, ನುಡಿ ಹೂಗಳ
ತುಳಿಯುತಿಹರೊ.

ಕಾಲ ಭೂತದ ಕಠಿಣ ಕತ್ತಲೆಯ ಸೆರೆಯಲ್ಲಿ
ಸಿಲುಕಿರುವ ಪುಲಿಕೇಶಿ ನೃಪತುಂಗ ಬಲ್ಲಾಳ,
ಹರಿಹರರೆ
ಇಲ್ಲಿಯೇ ಉಸಿರಾಡಿ ಈ ನಾಡು ಕಟ್ಟಿದಾ
ಎಲ್ಲರೇ ಮರುಳುವುದು ನಿಮ್ಮ ಸಿರಿ ಸೂರೆಗೈಯೆ

(डॉ. रं. श्री. मुगळी यांनी कर्नाटकाच्या गतवैभवाबद्दलचे विचार या कवितेंत व्यक्त केले आहेत.

## कठीण शब्द व वाक्ये

| | |
|---|---|
| ಹಗೆ | शत्रू |
| ಹಸುಗೂಸು | तान्हेमूल |
| ನೆಗೆದು | उडी मारून |
| ತೊಟ್ಟಿಲ | पाळणा |
| ಮೆಟ್ಟು | तुडविणे |
| ಊಳಿಗ | नौकरी |
| ನಾಯಿಬಾಳು | कुत्र्याचे जिणे |
| ಹೇಡಿನುಡಿ | नामर्दपणाचे बोलणे |
| ಬೊಗಳು | भुंकणे |
| ಸಾರಿಬನ್ನಿರಿ | यावे, यावे |
| ಸರುವ | सर्व |
| ಹರಿದುಹಂಚುವ | फुटीरपणाचे |
| ಈಸು | पोहणे |
| ಜೈಸು (ಜಯಿಸು) | जिंकणे |
| ಸೊಲ್ಲು | ध्वनी |
| ಗಾಳಿಯುಯ್ಯಾಲೆ | वाऱ्याचा झोपाळा |
| ತೂಗು | झोके घेणे |
| ಒಲ್ಲೆ | नको |
| ತೂರು | फेकणे |
| ಚೆಲುವು | सौंदर्य |
| ನನೆಕೊನೆ | शाश्वतपणे |
| ನುಡಿ | भाषा |
| ಸೆರೆ | कारागृह |
| ಸಿಲುಕು | अडकणे |
| ಪುಲಿಕೇಶಿ | प्रसिद्ध चालुक्य सम्राट |
| ನೃಪತುಂಗ | अमोघवर्ष राष्ट्रकूट चक्रवर्ती 'कविराजमार्ग' या लक्षण ग्रंथाचा कर्ता |

| | |
|---|---|
| ಬಲ್ಲಾಳ ಹರಿಹರ | विजयनगर साम्राज्याचे संस्थापक बल्लाळ व हुक |
| ಉಸಿರಾಡು | श्वास घेणे |
| ಎಲ್ಲರೆ | साऱ्यानो |
| ಮರಳುವುದು | परत या |
| ನಿಮ್ಮ ಸಿರಿ ಸೂರೆಗೈಯು | तुमचे वैभव मोठ्या प्रमाणांत दाखवावयास |



ಧಡಾ ೩೦ ವಾ                ಮೂವತ್ತನೆಯ ಪಾಠ

**ಕಾದಂಬರಿ**

ಕೇಶವನು ಪುಣೆಯನ್ನು ನೋಡಿದ್ದಿಲ್ಲ. ನರಹರಿಯು ತಿರುಗಾಡಿ ಅವನಿಗೆ ಎಲ್ಲವನ್ನು ತೋರಿಸಿದ. ಕುಸುಮಾನಲ್ಲಿ ಆದ ಅಸಾಧಾರಣ ಮಾರ್ಪಾಟನ್ನು ನೋಡಿ ಕೇಶವನು ಬೆರಗುಗೊಂಡಿದ್ದ. ದೇಸಾಯರ ನಿಷ್ಕಾಳಜಿ ಹಾಗೂ ಉದಾಸೀನ ವೃತ್ತಿ ಈಗ ವೇದಾಂತೀ ವೃತ್ತಿಯಾಗಿ ರೂಪಗೊಂಡಿದ್ದನ್ನು ನೋಡಿ ಅವನಿಗೆ ಇನ್ನಷ್ಟು ಆಶ್ಚರ್ಯವಾಯಿತು. ಮಾತಿಗೆ ಮಾತು ನಡೆದಾಗ ನಿನ್ನ ತಾಯಿ ಹೆಂಗಿದ್ದಾಳಪಾ! ಕೇಶವಾ! ನೀನು ಜಗಳಾಡಿಯುಂತಲ್ಲ ಆಕಿ ಕೂಡ ಎಂದು ದೇಸಾಯರು ಕೇಳುತ್ತಿದ್ದರು. ಮೊಗ್ಗಾಪಿಯ ಈ ಎಲ್ಲ ಸುದ್ದಿಗಳು ಸಹ ಮುಟ್ಟಲು ತಡವಾಗುತ್ತಿದ್ದಿಲ್ಲ. ಈ ಸುದ್ದಿಯನ್ನಂತೂ ಸ್ವತಃ ನರಹರಿಯೇ ತಂದಿದ್ದ. "ಏನಪಾ! ಕೂಡಿ ಕೊಂಡು ಹೋಗೋ ಸ್ವಭಾವ ಅಲ್ಲ ಆಕೀದು," ಎಂದು ಅತ್ತಿತ್ತ ನೋಡುತ್ತ ಸಂಕೋಚಗೊಂಡು ಕೇಶವನು ಉತ್ತರ ಕೊಟ್ಟ. "ಈ ನಿನ್ನ ಹೆಂಡತೀನೂ ಪದ್ಮಾವತಿ ಹಂಗ ಸೌಮ್ಯ ಅಲ್ಲ. ಒಮ್ಮೆ ಕಷ್ಟ ಪಡಿಸಿದ ವರು ತಾವೂ ಕಷ್ಟ ಪಡತಾರ ಅದೂ ದೇವರ ನಿಯಮ." ಎಂದು ದೇಸಾಯರು ಉದ್ಗಾರ ತೆಗೆದಿದ್ದರು. ಆದರೆ ಒಂದೆರಡು ನಿಮಿಷ ಧೇನಿಸುತ್ತ "ಈ ಜಗತ್ತಿನ್ಯಾಗ ಯಾರ ದೇನು ಶಾಶ್ವತ? ಎಲ್ಲಾರ ಬಾಯಿ ಒಂದಿಲ್ಲ ಒಂದು ದಿವಸ ಮುಚ್ಚತಾವ. ಧರ್ಮಲಂಡರ ಮನೀ ಅಂತ ಇಲ್ಲೇನು ನಿಮ್ಮ ಅಪ್ಪ ಬರಲಿಕ್ಕಿಲ್ಲ. ನೀ ಅಲ್ಲೆ ಹೋದ ವ್ಯಾಲ ಹೇಳು. ನಾನು ಅಲ್ಲೆ ಒಮ್ಮೆ ಬಂದು ಭೆಟ್ಟಿಯಾಗತೇನಿ ಅಂತ," ಎಂದು ದೇಸಾಯರು ಹೇಳಿದ್ದರು. ತಮ್ಮ ಪುರಾತನ ಸಂಬಂಧವೊಂದು ವಿಮೋಚನೆಯಿಲ್ಲದೆ ನಿಂತಿತ್ತು. ಅದನ್ನೂ ಈಗ ಸರಿಪಡಿಸಬೇಕೆಂದು ದೇಸಾಯರು ಬಗೆದಂತೆ ಕಂಡಿತು.

ಅಲ್ಲಿಯೇ ಇದ್ದ ಕುಸುಮಾ ಇದರ ಬಗ್ಗೆ ಏನೂ ಮಾತಾಡಿದ್ದಿಲ್ಲ. "ಕೇಶಣ್ಣಾ! ವೈನಿ ಪುಣೆ ನೋಡಿಲ್ಲ. ಒಮ್ಮೆ ಕರಕೊಂಡುಬಾ. ಇಲ್ಲಿ ನಾಲ್ಕ ದಿನ ಇದ್ದು ಹೋಗಲಿ" ಎಂದು ಸರಳ ಮನಸ್ಸಿನಿಂದ



स्वर्गीय कृष्णराव, अ. न.

## कठीण शब्द व वाक्ये

| | |
|---|---|
| ಹಬ್ಬ | सण |
| ಮೆಲ್ಲು | खाणे, 'चरणे' |
| ಮನವರಿಕೆ | समजूत |
| ಒಣ | कोरडे, रूक्ष |
| ನಿವೇದಿಸು | नैवेद्य दाखविणे |
| ಒತ್ತಾಯ | सक्ति |
| ಸಂಸ್ಕೃತ | सुसंस्कृत |
| ಒಗ್ಗಟ್ಟು | ऐक्य |
| ಕಿರುದನಿ | मंद आवाज |
| ಬೆರೆತುಕೊಂಡಿದೆ | मिसळले आहे |
| ನಗುಮೊಗ | हसरा चेहरा |
| ನುಡಿಸು | वाजविणे |
| ಪೊರೆ | संरक्षण करणे |
| ಬೊಂಬೆ | बाहुली |
| ಎಂದು | जेव्हा |
| ಅರಿತು | समजून घेवून |
| ಜನ್ಮವೀಯು | जन्म देणे |
| ತ್ರಿಕರಣಪೂರ್ವಕವಾಗಿ | तीन इंद्रिय (शरीर, वाचा, मन) पूर्वक खऱ्या अंतःकरणाने |



ಧಡಾ ೩೫ ವಾ ಮೂವತ್ತೈದನೆಯ ಪಾಠ

ಆತ್ಮ ಚರಿತ್ರೆ

## ನಾನು ಮತ್ತು ನನ್ನ ಜೀವನ

ಎಪ್ಪತ್ತರ ಗಡಿ ದಾಟಿ ನಿಂತ ನನ್ನಲ್ಲಿ ಗತಜೀವನದ ನೆನಪುಗಳೆಲ್ಲವೂ ಮಾಸದೆ ನಿಂತಿವೆ, ಮತ್ತೆ ಮರುಕಳಿಸುತ್ತಿವೆ. 'ನಾನು ಮತ್ತು ನನ್ನ ಸಾಹಿತ್ಯ' ಕುರಿತು ಬರೆಯಬೇಕೆಂದು ಕರ್ಮವೀರದ ಸಂಪಾದಕರು ಕೇಳಿದ್ದಾರೆ. ಕಳೆದ ಅರ್ಧಶತಮಾನ ಕಾಲವೂ ನಾನು ಅದನ್ನೇ ಮಾಡುತ್ತ ಬಂದಿದ್ದೇನೆ—ಬರೆದದ್ದನ್ನು ಕುರಿತು ಹೇಳುವುದು, ಹೇಳುವುದನ್ನು ಕುರಿತು ಬರೆಯುವುದು.

ನಾಟಕ, ಪ್ರಬಂಧ ಮುಂತಾದ ಗದ್ಯರೂಪದಲ್ಲಿಯೂ ನನ್ನ ಲೇಖನಿಯಾಡಿದೆ. ಆದರೂ ಜನಸಾಮಾನ್ಯಕ್ಕೆ ನಾನು ಕವಿ. ಇಷ್ಟೇ ಅಲ್ಲ, ನಾನೇ ನನ್ನ ಗಮಕಿ; ನಾನೇ ನನ್ನ ವಾದಿ-ಸಂವಾದಿ; ನಾನೇ ನನ್ನ ವಿಮರ್ಶಕ-ವಾಗ್ಮಿ. ಇಂತು ಚತುರಂಗ ಸಿದ್ಧನಾಗಿ ಕಳೆದ ಐವತ್ತು ವರ್ಷ ಸಾಧನೆ ಮಾಡಿದ್ದೇನೆ. ಇದು ಜನ ನನ್ನನ್ನು ಕಂಡ ದೃಷ್ಟಿಯಾದರೆ ನನ್ನನೇ ನಾನು ಕಂಡಿರುವ ದೃಷ್ಟಿ ತುಸು ಭಿನ್ನವಾಗಿದೆ.

ನಾನು

ವಿಶ್ವಮಾತೆಯ ಗರ್ಭಕಮಲಜಾತ
ಪರಾಗ ಪರಮಾಣು ಕೀರ್ತಿ ನಾನು
ಭೂಮಿತಾಯಿಯ ಮೈಯ ಹಿಡಿಮಣ್ಣು
ಗುಡಿಗಟ್ಟಿ ನಿಂತಂಥ ಮೂರ್ತಿ ನಾನು
ಭರತಮಾತೆಯ ಕೋಟಿ ಕಾರ್ತಿಕೋತ್ಸವದಲ್ಲಿ
ಮಿನುಗುತಿಹ ಜ್ಯೋತಿ ನಾನು
ಕನ್ನಡದ ತಾಯ ತಾವರೆಯ ಪರಿಮಳ
ಉಂಡು ಬೀರುತಿಹ ಮೂರ್ತಿ ನಾನು
ನನ್ನ ತಾಯಿಯ ಹಾಲ ಜೀವಂತ ನೆತ್ತರವ
ಕುಡಿದಂಥ ಮಮತೆ ನಾನು
ಈ ಐದು ಐದೆಯರ ಪಂಚಪ್ರಾಣಗಳಾಗಿ
ಈ ಜೀವ ದೇವನಿಹನು

ಹೃದಯಾರವಿಂದದಲ್ಲಿರುವ ನಾರಾಯಣನೆ
ತಾನಾಗಿ 'ದತ್ತ' ನರನು
ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ
ಅಂಬಿಕಾತನಯನಿವನು

ವಿಶ್ವಮಾತೆ, ಭೂಮಾತೆ, ಭಾರತಮಾತೆ, ಕರ್ನಾಟಕಮಾತೆ, ಜನ್ಮದಾತೆ- ಈ ಐವರು ಮಾತೆಯರ ಮಮತೆ ಕರುಣಾಪ್ರಸಾದದಿಂದ ಜನಿಸಿದ ಕಂದ ನಾನು. ನನ್ನ ಪಂಚಪ್ರಾಣಗಳೇ ಈ ಪಂಚಮಾತೆಯರು. ನಾರಾಯಣನೇ ತಾನಾದ ದತ್ತ ನರನು ನಾನು. ವಿಶ್ವದ ಒಳನುಡಿಯಾಗಿ, ಅಂಬಿಕಾತನಯನೆಂಬ ಹೆಸರಿನಲ್ಲಿ ಕನ್ನಡಿಸುತ್ತಿಹೆನು, 'ನಾರಾಯಣ ನಾದ' ವನ್ನು.

ನಾನು ಹುಟ್ಟಿದುದು ೧೮೯೬ ರಲ್ಲಿ. ರೇಡಿಯಂ ಅವತಾರ, ಪ್ಲೇಗಿನ ಸಂಚಾರ ನಡೆದ ಸಂವತ್ಸರವದು. ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಮಾಧ್ಯಮಿಕ ಶಿಕ್ಷಣ ಮುಗಿಸಿ ಹೆಚ್ಚಿನ ಶಿಕ್ಷಣಕ್ಕಾಗಿ ಪುಣೆಯ ಫರ್ಗ್ಯೂಸನ್ ಕಾಲೇಜು ಸೇರಿದ್ದೆ. ಅಲ್ಲಿರುವಾಗಲೆ ೧೯೧೬ ರಲ್ಲಿ ಅಂದರೆ ಇಪ್ಪತ್ತನೆಯ ವಯಸ್ಸಿನಲ್ಲಿ ನನ್ನಲ್ಲೊಂದು ಪ್ರಜ್ಞೆ ತಲೆದೋರಿತು. ಅಂದು ಗುರುಪ್ರತಿಪದೆ— ನನ್ನ ಹುಟ್ಟುಹಬ್ಬ. ತಾಯಿ ಅಂಬಾಬಾಯಿ ಸಡಗರದಿಂದ ಸಿಹಿ ಮಾಡಿದ್ದಳು. ಆದರೆ ನನ್ನೊಳಗೆ ನಾನೊಂದು ಬಗೆಯ ಪರೀಕ್ಷೆಯನ್ನೇ ಎದುರಿಸುತ್ತಿದ್ದೆ. ನಾನು ಇಪ್ಪತ್ತು ವರ್ಷ ಬದುಕಿದ್ದರ ಲೆಕ್ಕವೇನು? ಉದ್ಭವವಾಗಲಿರುವ ಕವಿತ್ವವನ್ನು ಅನುಭವಿಸಿಯೂ, ಬೇಂದ್ರೆಯ ಜೀವನ ವಿಮರ್ಶಕ ದೃಷ್ಟಿಯು ಬಾಳಿನ ಲೆಕ್ಕಪತ್ರ ಹುಡುಕಾಡುತ್ತಿತ್ತು. ಆಯವೇನು, ದಾಯವೇನು? ಸಿದ್ಧಾಯವೇನು, ಸಂದಾಯವೇನು? ವ್ಯಯವೇನು, ಅವ್ಯಯವೇನು? ಉಳಿದದ್ದೇನು, ಬೆಳೆದದ್ದೇನು? ಇದು ಜಿಜ್ಞಾಸೆಯ ಕುರುಕ್ಷೇತ್ರವಾಗಿತ್ತು. ಈ ಮಸದಾಟದಲ್ಲಿ ಇಬ್ಬರು ಗೆಳೆಯರು ನನಗೆ ಉದ್ದೀಪಕರೂ ದೀಪಕರೂ ಆಗಿದ್ದರು. ಒಬ್ಬ ನಮ್ಮ ಶಿರಹಟ್ಟಿಯ ಮಾಮಲೇದಾರ ಖಾಡಿಲ್ಕರ ಹರಿಪಂತರ ಮಗ ಪ್ರಭಾಕರ ಹರಿ ಅಥವಾ ನಾನಾ ಖಾಡಿಲ್ಕರ. ಇವನ ಚಿಕ್ಕಪ್ಪನೇ ಪ್ರಖ್ಯಾತ ಮರಾಠಿ ನಾಟಕಕಾರನೂ ಲೋಕಮಾನ್ಯರ ಎಡಗೈ ಬಲಗೈಯಂತಿದ್ದವನೂ ಆದ

ಕೃಷ್ಣಾಜಿ ಪ್ರಭಾಕರ ಖಾಡಿಲ್ಕರ. ಇನ್ನೊಬ್ಬ ಗೆಳೆಯ, ಬಾಲಸ್ನೇಹಿತ ಶ್ರೀಧರ ಶಿವರಾಮ ಖಾನೋಳಕರ. ಇವನ ತಂದೆಯೆ ಧಾರವಾಡದಲ್ಲಿ ವೆಂಕಟ ರಂಗೋ ಕಟ್ಟಿ ಯುಗವನ್ನು ಪ್ರಬಲಿಸಿ, ಮುದವೀಡು ಕೃಷ್ಣ ರಾಯರನ್ನು ಮುಂದೆ ಮಾಡಿ, ಪುಣೆ ಅಜ್ಞಾತ ವಾಸವನ್ನು ಯರವಡಾ ಸೆರೆಮನೆಯ ಮುದ್ರಣಾಲಯದಲ್ಲಿ ತಪಸ್ವಿಯಂತೆ ಕಾಲ ಕಳೆಯುತ್ತಿದ್ದ ಶಿವರಾಮಪಂತ ಖಾನೋಳಕರ. ಪುಣೆಯಲ್ಲಿ ನಮ್ಮ ಚಿಕ್ಕಪ್ಪ ಬಂಡೋ ಪಂತರ ಮನೆಯಲ್ಲಿ 'ಶಾರದಾಮಂಡಲ'ವೆಂಬ ಗೆಳೆಯರ ಗುಂಪೊಂದು ಗೂಡುಗಟ್ಟಿತ್ತು. ಗೋಖಲೆ-ಟಿಳಕರ ವೈತ್ರಿಯ ಸರಸ-ವಿರಸ ನಮ್ಮ ಚರ್ಚೆಗೆ ವಿಷಯವಾಗುತಿತ್ತು. 'ಗೀತಾ ರಹಸ್ಯ'ವಾಯಿತು; 'ವಿದ್ಯಾಹರಣ' ನಾಟಕವಾಯಿತು; ಗೋವಿಂದಾಗ್ರಜರ 'ಮುರಲಿ' ಕವನವಾಯಿತು. ಮುಂದೇನು?

ಇತ್ತ ಧಾರವಾಡದಲ್ಲಿ ಶಾಂಕವಿಗಳು ಆಲೂರರ ಗತವೈಭವ, ವಿದ್ಯಾರಣ್ಯ ಚರಿತ್ರೆಗಳಿಗೆ ಹಿಮ್ಮೇಳದವರೇ ಏಕೆ, ಭಾಗವತರೂ ಆದರು. ವಿದ್ಯಾರಣ್ಯ ಕೀರ್ತನೆಯ 'ಏಳು ಸಾಯಣ ಕಟ್ಟು ಗ್ರಂಥವ' ಈ ಪಲ್ಲವಿಯು ಎಲ್ಲೆಲ್ಲೂ ಪ್ರತಿಧ್ವನಿಸುತ್ತಲಿತ್ತು. ಅದೇ ಸುಮಾರಿಗೆ ಬಿ. ಎ. ಮುಗಿಸಿ ನಾನು ವಿಕ್ಟೋರಿಯಾ ಹೈಸ್ಕೂಲಿಗೆಯೆ ಶಿಕ್ಷಕನೆಂದು ಬಂದೆ. ಧಾರವಾಡದ ಅಂದಿನ ವಾತಾವರಣವೇ ನನ್ನಲ್ಲಿ ಹೊಸ ಚೈತನ್ಯ ಮೂಡಿಸಿ ರಬೇಕು. ನನ್ನೊಳಗಿನ 'ಅಂಬಿಕಾತನಯದತ್ತ' ತನ್ನ 'ತುತ್ತೂರಿ' ಊದಿದ. ಅದರ ಪ್ರಥಮ ವಾಚನವು ಪುಣೆಯಲ್ಲಿಯ ಮೋರೋಬಾದಾ ದಾವಾಡಾದಲ್ಲಿದ್ದ 'ಕರ್ನಾಟಕ' ಸೋಶಲ್ ಕ್ಲಬ್‌ನಲ್ಲಿ ಆಯಿತು.

ಆಗ ಶ್ರೀ ಅರವಿಂದರ 'ಆರ್ಯ' ಪತ್ರಿಕೆಯಲ್ಲಿ The Future Poetry ಎಂಬ ಲೇಖನಮಾಲೆಯಲ್ಲಿ Essence of Poetry ಎಂಬ ಲೇಖನ ಕಾಣಿಸಿಕೊಂಡಿತ್ತು. ಮುಂದಿನ ಮೇ ತಿಂಗಳ ಸಂಚಿಕೆಯಲ್ಲಿ ಶೆಲ್ಲಿ ಮತ್ತು ಕೀಟ್ಸರ ವಿಷಯ ಬಂತು. ಶೆಲ್ಲಿಗಿಂತ ಕೀಟ್ಸ್ ನನಗೆ ಹೆಚ್ಚು ಪ್ರಿಯನಾಗಿದ್ದ. ಕೀಟ್ಸನ ಕಾವ್ಯದ ಬಗ್ಗೆ ಶ್ರೀ ಅರವಿಂದರು "He (Keats) saw her (Poetry) in three of her four forms, sensuous beauty, imaginative beauty, intellectual beauty and ideal

beauty" ಎಂದು ಹೇಳಿದ್ದಾರೆ. ಈ ನಾಲ್ಮೊಗದ ದರ್ಶನ ನನ್ನ ಜೀವನಕ್ಕೆ ಚತುರ್ಮುಖತೆಯನ್ನಿತ್ತಿತು. ಈ ಚತುರ್ಮುಖತೆಯನ್ನು ನಾನು ಅನೇಕ ಬಗೆಗಳಲ್ಲಿ ಕಂಡಿದ್ದೇನೆ. ಕೌಟುಂಬಿಕ ಅಥವಾ ದೈಹಿಕ, ವಿಮರ್ಶಕ ಅಥವಾ ಸಾಂಸ್ಕೃತಿಕ, ಸೃಜನಶೀಲ ಅಥವಾ ಪ್ರಾತಿಭ, ಸಾಧಕ ಅಥವಾ ಸಾಕ್ಷಿಕ ಎಂದು ಸುಳಿ ಹಿಡಿದಿದ್ದೇನೆ.

ಧಾರವಾಡದಲ್ಲಿ ೧೯೧೮ ರಲ್ಲಿ ನಡೆದ ನಾಲ್ಕನೆಯ ಕರ್ನಾಟಕ ಸಾಹಿತ್ಯ ಸಮ್ಮೇಲನದಲ್ಲಿ ನನ್ನ ಕವಿತೆಗೆ ಒಂದು ಮುಖ ಬಂತು. ಈ ಸಮ್ಮೇಲನಕ್ಕಾಗಿ ಬಂದಿದ್ದ ಮದ್ರಾಸಿನ ಬೆನಗಲ್ ರಾಮರಾಯರು, ಮಂಗಳೂರಿನ ಗೋಪಾಲಕೃಷ್ಣರಾಯರು, ಬೆಂಗಳೂರಿನ ಚಿನ್ನ ಕೇಶವ ಅಯ್ಯಂಗಾರ್ಯರು ಮೊದಲಾದವರನ್ನು ಕಾನುನಕಟ್ಟೆಯಲ್ಲಿ ಗೋಖಲೆ ಅವರ ಮನೆಯಲ್ಲಿ ಕಂಡು ಅವರೆದುರು ನನ್ನ ದೀರ್ಘ ಕವನ "ಕೋಗಿಲೆ ಕೋಗಿಲೆ ಎಂದು ಬಂದೆ ನೀ ಹೇಳೆ ಹೇಳೆ ಗೆಳತೀ" ಎಂಬುದನ್ನು ಓದಿ ತೋರಿಸಿದಾಗ ಮೆಚ್ಚಿ ಸ್ವಾಗತಿಸಿದರು. ಆಗ ಪೋತನೀಸರ ಓಣಿಯಲ್ಲಿ ರಾಯದುರ್ಗರ ಮನೆಯಲ್ಲಿರುತ್ತಿದ್ದ ಆಲೂರ ವೆಂಕಟರಾಯರೇ ನನ್ನನ್ನು ಈ ಸಹೃದಯ ಹಿರಿಯರೆಡೆ ಕರೆದೊಯ್ದವರು. ಶುಕ್ರವಾರ ಪೇಟೆಯಲ್ಲಿಯ ಶ್ರೀ ಬಿಂದೂರಾವ ದೇಸಾಯಿಯವರ ಮನೆಯಲ್ಲಿ ಕೂಡ ಈ ಕವಿತೆಯ ವಾಚನವಾಯಿತು. ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಕಡಪಾ ರಾಘವೇಂದ್ರರಾಯರ ಪುರಸ್ಕಾರದೊಡನೆ; ಶಾಂತಕವಿಗಳು, ಕಾವ್ಯನಂದರು, ಜಠಾರ ಬಳವಂತ ರಾಯರು ಇವರ ಸಹೃದತೆಯಿಂದಾಗಿ ಆಗಿನ ಕವಿತಾ ಮಾಸಪತ್ರಿಕೆ 'ಪ್ರಭಾತ'ದಲ್ಲಿ (೧೯೧೮ ನೇ ಇಸ್ವಿಯ ಶ್ರಾವಣದ ಸುಮಾರಿಗೆ) ನನ್ನ 'ತುತ್ತೂರಿ' ಪ್ರಕಟವಾಯಿತು. ಮುಂದೆ ನನ್ನ ಖಂಡಕಾವ್ಯ 'ಕೃಷ್ಣಾಕುಮಾರಿ' ಪುಸ್ತಕ ರೂಪದಲ್ಲಿ ಬಂತು.

ನನ್ನ ಜೀವನದ ಮೂರನೆಯ ದಶಕ ನನ್ನ ಕಾವ್ಯ ತುಂಬ ಪಲ್ಲವಿಸಿದ ಕಾಲ. ಪುಣೆಯೊಳಗಿನ 'ಶಾರದಾಮಂಡಳ' ಈಗ ಧಾವಾಡದಲ್ಲಿ ಗೆಳೆಯರ ಗುಂಪಾಯಿತು. ಗುಂಪು ಪಂಪೋತ್ಸವ, ಬಸವಜಯಂತಿ, ವಿದ್ಯಾರಣ್ಯ ಪುಣ್ಯದಿನ, ಶಾಂತಕವಿ ಸ್ಮೃತಿದಿನ ಆಚರಿಸಿ; ಆಲೂರರ 'ಜಯಕರ್ನಾಟಕ'ಕ್ಕೆ ಬೆಂಬಲ ನೀಡುತ್ತಲೆ ರಾಷ್ಟ್ರೀಯ ಶಾಲೆಯ

'ಸ್ವಧರ್ಮ'ವನ್ನು ತನ್ನ ಮುಖಪತ್ರವನ್ನಾಗಿ ಮಾಡಿಕೊಂಡು ನಾಡಹಬ್ಬದಂಥ ಯಜ್ಞವನ್ನೂ ಹಮ್ಮಿಕೊಂಡಿತು. ಗುಂಪಿನ ವಿವಿಧ ಪ್ರಾಜ್ಞರೂ ಗೆಳೆಯರೂ ಎಳೆಯರೂ ಹಳ್ಳಿ ಹಳ್ಳಿಗೆ ಹೋಗಿ ದೇಶಭಕ್ತಿ, ರಾಷ್ಟ್ರಭಕ್ತಿ, ಕರ್ನಾಟಕ ಸಾಹಿತ್ಯಭಕ್ತಿ, ಭಾರತೀಯ ಸಂಸ್ಕೃತಿಯ ಪ್ರೀತಿ, ಶ್ರೀ ಅರವಿಂದರ ನವೀನಪೂರ್ಣಯೋಗದ ಸೂತ್ರ ಇವೆಲ್ಲವುಗಳನ್ನು ಕುರಿತು ಭಾಷಣ ಮಾಡುತ್ತಿದ್ದರು. ಸಿದ್ದವನಹಳ್ಳಿ ಕೃಷ್ಣಶರ್ಮರು, ಹಲಸಂಗಿಯ ಮಧುರ ಚೆನ್ನರು, ಬೆಳಗಾಂವಿಯ ಪಾಟೀಲ ಶಂಕರಗೌಡರು 'ಸ್ವಧರ್ಮ'ದ ಶಾಖಾ ವಿಸ್ತಾರದಲ್ಲಿ ತಮ್ಮ ತಮ್ಮದೇ ಆದ ವಿಲಾಸದಿಂದ ಜೀವನವಿಸ್ತಾರ ಮಾಡುತ್ತಿದ್ದರು.

೧೯೨೬ ರಿಂದ ೧೯೩೬ ರ ವರೆಗಿನ ಹತ್ತು ವರ್ಷ ಬೇಂದ್ರೆ ಮತ್ತು ಗೆಳೆಯರ ಗುಂಪು ಒಬ್ಬರಲ್ಲೊಬ್ಬರು ಬೆರೆತು ಹೋಗಿದ್ದ ಕಾಲ. ಆಗಲೇ ಗುಂಪು 'ಹಕ್ಕಿ ಹಾರಿಸಿ' ಉತ್ತರ ಕರ್ನಾಟಕದಲ್ಲಿ ಹೊಸ ಕಾವ್ಯಯುಗವನ್ನೇ ಆರಂಭಿಸಿತೆಂದು ಹೇಳಬೇಕು. ಆಲೂರರ 'ಜಯ ಕರ್ನಾಟಕ' ಗುಂಪಿನ ಮುಖಪತ್ರವಾಗಿ ಮೆರೆಯಿತು. ಆದರೆ ಗೆಳೆಯರು ಚದುರಿದಾಗ ಗುಂಪು ಮೂಲೆಗುಂಪಾಯಿತು. ಈ ಕಾಲದಲ್ಲಿಯೇ 'ಗರಿ'ಯ ಕವನಗಳಿಗೆ ಗರಿ ಮೂಡಿತು. ವಿಜಯನಗರದ ಕೊಂಪೆ ಕರ್ನಾಟಕ ಏಕೀಕರಣಕ್ಕೆ ಸಾಹಿತ್ಯದ ರಸಗರ್ಭ ಒದಗಿಸಿತು. ಆದರೆ ಬೇಂದ್ರೆಗೆ ಮಾತ್ರ, ಗೆಳೆಯರ ಅಂತಃಕರಣದಲ್ಲಲ್ಲದೆ, ನಿಲ್ಲಲು ನೆಲೆಯಿಲ್ಲದಾಯಿತು. ಅಣ್ಣ ಮಾಸ್ತಿಯ ವರಂತೆ ಹಲ ಗೆಳೆಯರ ಸನಿಮಿತ್ತ ಅನಿಮಿತ್ತ ಸ್ನೇಹವು ಜೀವನಕ್ಕೆ ಕಾದಂಬರಿಯ ಬಣ್ಣ ಬಳೆದಿತು. ಕವನ ಸಂಗ್ರಹಗಳಿಗೆ ಶಿವಮೊಗ್ಗ, ಹೈದರಾಬಾದಗಳಿಂದ ಪ್ರಕಾಶಕರು ಬಂದರು. ನಿರಾಲಂಬದಲ್ಲಿ ಜೋತಾ ಡುವುದೇ ಜೀವನ ಸೂತ್ರವಾಯಿತು. ಹಿಂಡಲಗಿ, ಮುಗದ, ಪುಣೆಗಳ ಜ್ಞಾತಾ ಜ್ಞಾತ ವಾಸ, ಮಕ್ಕಳ ಗೋಳು, ಹೆಂಡತಿಯ ಎಳತಾಟ ಕಾವ್ಯಧಾರೆಗೆ ಸಾಣೆ ಹಿಡಿದವು. 'ಅಂಬಿಕಾತನಯ' ನ ಮಂತ್ರ ಹೇಳುತ್ತ ಮಾಸ್ತರ ಬೇಂದ್ರೆ ಸರಸ್ವತಿಯ ಪೂಜಾರಿಯಾದರು.

'ಸಖೀಗೀತ', 'ಮೇಘದೂತ', 'ಹಾಡು-ಪಾಡು'ಗಳು ಹೊರಬಂದ ವು. 'ಹಾಡುಪಾಡು' ಆದೀಗ ಅಗಲಿದ ಮಗನನ್ನು ಕುರಿತಾಗಿದ್ದರೆ

'ಮೇಘದೂತ' ಕವಿಗುರು ಕಾಲಿದಾಸನಿಗೆ ಸಾನರ್ಪಿಸಿದ ಕಾಣಿಕೆ. ಭಾರತೀಯ ನವಜನ್ಮ', 'ಉಪನಿಷದ್ರಹಸ್ಯ' ಮೊದಲಾದ ತಾತ್ವಿಕ ಗ್ರಂಥಗಳು ಮೂಡಿ ಬಂದುದೂ ಈಗಲೆಯೇ.

೧೯೩೬ರಿಂದ ೪೬ರ ದಶಕ ಜೀವನ ಉಯ್ಯಾಲೆಯಾಗಿ ಪರಿಣಮಿಸಿತು. ಇಂದು 'ಜೀವನ' ಪತ್ರಿಕೆಯ ಸಂಪಾದಕನಾದರೆ, ನಾಳೆ ಗದುಗಿನ ಸಾಲೆಯ ಪ್ರಿನ್ಸಿಪಾಲ್; ನಾಡಿದ್ದು ಹುಬ್ಬಳ್ಳಿಯ ಸಾಲೆಗೆ 'ವಾರದಾಗ ಮೂರು ಸಾರಿ ಹೋಗಿ ಬರುವ' ಧಾರವಾಡದ ಯಾತ್ರಿಕ; ಅದರಾಚೆಗೆ ಮತ್ತೆ ಪುಣೆಯ ಆಧಾರ. ಅನಂತರ ಬಂತು ಸೊಲ್ಲಾಪುರದ ಸಿದ್ಧರಾಮನ ಸಾನ್ನಿಧ್ಯ. ಕೆಂಡದ ಹೊಂಡ ದಾಟಿಸಿದ ಕಾರ್ತಿಕ ಮಾಸವು ಬದುಕಿನ ರೌದ್ರದಲ್ಲಿ ಬಾಳಿನ ಕಾರುಣ್ಯಧಾರೆಯನ್ನು ಹರಿಯಿಸಿತು. ದಿವಂಗತ ಶಾನಭಾಗರ ಅಗಮ್ಯ ಆದರವು ನನ್ನಲ್ಲಿ ಹೊಸ ಎಚ್ಚರ ಮೂಡಿಸಿತು. ಹಲಸಂಗಿಯ ಸಾಮೀಪ್ಯ ಹೊಸ ನಿಲುವಿಗೆ ನಾಂದಿಯಾಯಿತು. ಪಾಂಡಿಚೇರಿಯ ಪ್ರತ್ಯಕ್ಷ ದರ್ಶನ, ಶಿವಮೊಗ್ಗಿ ಮಾಡಿದ ಸನ್ಮಾನ, ಧಾರವಾಡದ ತಾಯಿಯು ಬೆನ್ನಿಗಿದ್ದಾಳೆಂಬ ಪ್ರತೀತಿ ಕುಟುಂಬೀಯರಿಗೆ ವಿಷಮ ಸಂಧಿಯಲ್ಲೂ ಸಮಾಧಾನದ ಸೊಗಸು ತಂದವು.

೧೯೪೬ರಿಂದ ೫೬ರ ವರೆಗಿನ ಹತ್ತು ವರ್ಷಗಳಲ್ಲಿ ಸ್ಥಾಯಿಯ ಅಚ್ಯುತತೆಯಿಂದಾಗಿ ರಸೋತ್ಕರ್ಷವೇ ಅನುಭವಕ್ಕೆ ಬರುತ್ತಿತ್ತು. ಗುಳವಣಿ ಮಹಾರಾಜರು, ಪ್ರಭಾಕರ ಮಹಾರಾಜರು ಶ್ರದ್ಧೆಗೆ ಪುಷ್ಟತುಷ್ಟಿ ತಂದ ರಾದರೆ ವಿಟ್ಠಲಭಕ್ತಿ, ದತ್ತಭಕ್ತಿ, ಇವುಗಳ ಹೊಸ ನೆಲೆ ಬೆಲೆ ಕಂಡವು. ಕಾಲಿದಾಸ, ಜ್ಞಾನೇಶ್ವರ, ವಿದ್ಯಾರಣ್ಯ, ರತ್ನಾಕರ, ಅಲ್ಲಮರ ಅಭ್ಯಾಸವು ಶ್ರೀ ಅರವಿಂದರ ತತ್ವಕ್ಕೆ ಉನ್ನತಿಯನ್ನು ತಂದವು. ಪದಾರ್ಥವಿಜ್ಞಾನ ಶಾಸ್ತ್ರವನ್ನು ಭೇದಿಸಿ ಹೊಸ ಮೂರ್ತತೆ ಪೂರ್ತತೆ ತರುವ ದೃಷ್ಟಿದಾನ ಮಾಡಿತು. ಈ ಕಾಲದ ಸಾಧನೆ ವಿವಿಧ ಸಮಾಜಗಳವರ ಅನಪೇಕ್ಷಿತ ಪ್ರೇಮವು ಸಾರ್ವಭೌಮಿಕ ಮಾನವತೆಯ ಭಾವನೆಗೆ ಬುನಾದಿ ಹಾಕಿತು.

ನನ್ನ ಕಾವ್ಯಸಂಗ್ರಹಗಳಲ್ಲಿ ಬಹಳಷ್ಟು ಬೆಳಕು ಕಂಡುದು ಈ ಕಾಲದಲ್ಲಿಯೆ. 'ಗಂಗಾ ವತರಣ' ದಿಂದ ಪ್ರಾರಂಭವಾಗಿ, 'ಸೂರ್ಯ ಪಾನ' ದಿಂದ ಮೊದಲುಗೊಂಡ 'ಅರಳುಮರಳು' ಸಂಗ್ರಹದ ಐದೂ ಕವನ ಸಂಗ್ರಹಗಳು ಈಗಲೆಯೆ ಬಿಡಿಯಾಗಿ ಗ್ರಂಥ ರೂಪದಲ್ಲಿ ಬಂದುವು.

ಬೇಂದ್ರೆ 'ಅಂಬಿಕಾತನಯ'ನಾಗಿ ಜನಮಾನಸದ ಅಂತಃಕರಣದಲ್ಲಿ ತನಗಾಗಿ ಸ್ಥಾನ ಪಡೆದಿರುವುದನ್ನು ಕೃತಜ್ಞತೆಯಿಂದ ಜೀವನದುದ್ದಕ್ಕೂ ನೆನೆಯಲೇಬೇಕು. ಸಾಹಿತ್ಯ ಸಮ್ಮೇಲನದ ಗದ್ದುಗೆಯ ಮೇಲೆ ಕೂಡಿಸಿ ಶಿವಮುಗ್ಗಿ ಮನ್ನಿಸಿತಾದರೆ, ಐವತ್ತು, ಅರವತ್ತು, ಎಪ್ಪತ್ತನೆಯ ವರ್ಷಗಳಲ್ಲಿ ಧಾರವಾಡ, ಸೊಲ್ಲಾಪುರ, ಶಿರಹಟ್ಟಿಯ ಗೆಳೆಯರು ಅಂಬಿಕಾತನಯನ ಕವಿತ್ವವನ್ನು ಗೌರವಿಸಿದರು. 'ಅರಳುಮರಳು', 'ನಮನ', 'ಹೊಸ ಸಂಸಾರ' ಮತ್ತು ಮರಾಠಿ 'ಸಂವಾದ' ವಿದ್ವಜ್ಜಗತ್ತಿನಲ್ಲಿ ಬಹುಮಾನ ರೂಪದಲ್ಲಿ ಮನ್ನಣೆ ಪಡೆದವು.

'ನಾವ್ ಬರ್ತೇವಿನ್ನ' ಎಂದು ಧಾರವಾಡದ ತಾಯಿಗೆ ನಮಸ್ಕರಿಸಿ ಬೀಳ್ಕೊಂಡು ಹೋದವನು ಮತ್ತೆ ಮರಳಿ ಬಂದು ಆ ತಾಯಿಯನ್ನೇ ಆಶ್ರಯಿಸಿ ನಿಂತ ಕಾಲ ೧೯೫೬ರ ನಂತರದ್ದು. ೧೯೫೬ರಿಂದ ೬೬ರ ವರೆಗಿನ ಹತ್ತು ವರ್ಷಗಳು ಬಾಳಿನ ದೇಗುಲಕ್ಕೆ ಗೋಪುರ ಕಟ್ಟಿವೆ. ಹಾನಾವಳಿ ಗೋದೂಬಾಯಿಯ ಮೊಮ್ಮಗ ದತ್ತೂ ಬೇಂದ್ರೆ ಧಾರವಾಡದ ತಾಯಿಯ ನಚ್ಚಿನ ಮಗನೆನಿಸಿ, ಶಿರಹಟ್ಟಿಯ ತವರೂರಿಗೆ ಬೇಕಾದವನಾದ. ಲೌಕಿಕ ಜೀವನವು ಸಾರ್ಥಕವೆನಿಸುವಷ್ಟು ಅನುಕೂಲತೆಯೊದಗಿ ಗೃಹಸ್ಥ ಜೀವನವು ವಾನಪ್ರಸ್ಥಕ್ಕೆ ಪ್ರಸ್ಥಾನವೆಯಾಗಬೇಕೆಂಬ ಪರಿಪಾಕಕ್ಕೆ ಹವಣು ಮಾಡಿದೆ. ಪಾಂಡಿಚೇರಿಯ ತಾಯಿಯವರ ಬಳಗದವನಾಗಿ, ಅದೇ ಪೀಳಿಗೆಗೆ ಸೇರಿದವರೊಡನೆ ಸಲಿಗೆ ಸಹವಾಸ ಬೆಳೆದಿದೆ. ಸಾಹಿತ್ಯ ಅಕೆಡಮಿಯ ಪುರಸ್ಕಾರ, ಆಕಾಶವಾಣಿಯ ಆಧಾರ, ಗೆಳೆಯರ ಸಹೃದಯತೆ, ಉದಾರ ಬುದ್ಧಿಯವರ ಸ್ವಾಗತ ಇವು ಬಾಳಿನ ಬಾಳಕಕ್ಕೆ ಉಪ್ಪಿನಕಾಯಿಯ ರುಚಿ ತಂದಿವೆ.

ಇತ್ತೀಚಿನ ನನ್ನ ಸಾಹಿತ್ಯದ ಮೇಲೆ ಕೀರ್ತಿ, ಮೊಟಾಶಿ ಮೊದಲಾದವರು ಪ್ರಬಂಧ ಬರೆದರು. ನನ್ನ ಕಾವ್ಯ ಕುರಿತು ಗೋಕಾಕ, ಮುಗಳಿ, ಶಿವರುದ್ರಪ್ಪ, ಕೈಕಿಣಿ, ಕಣವಿ, ಶ್ರೀಧರ ಮುಂತಾದವರು ಲೇಖನ ಬರೆದರು. ಇವರಿಂದ ಜನಕ್ಕೆ ನನ್ನ ಗುಣ ದೋಷ ಎಂತು ಕಾಣುತ್ತಿವೆಯೆಂಬುದನ್ನು ನೋಡುತ್ತಲಿರುವೆ.

ನನ್ನ ಕವನಗಳ ಭಾವಾರ್ಥಗರ್ಭವು ಗಹನವಾದಂತೆ ಶಬ್ದಾರ್ಥ ಸೌಲಭ್ಯವೂ ವಿಶಿಷ್ಟ ಬುದ್ಧಿವಾದಿಗಳನ್ನು ವಿಪರೀತ ಭ್ರಾಂತಿಗೆ ಈಡು

ಮಾಡುತ್ತಿದೆ. ತರ್ಕವಿತರ್ಕಗಳಿಗೆಯೆ ವಿಮರ್ಶೆಯೆನ್ನುವುದಾದರೆ ಸಾಹಿತ್ಯವು, ನೀರಸವೂ, ವಿರಸವೂ ಆಗಿ ತೋರುವುದುಂಟು. ವಿಚಾರ ಮಂಥನದಲ್ಲಿ ಇಂಥ ಸಂದರ್ಭಗಳೂ ಬರುವುದುಂಟು.

ನನ್ನ ಕಾವ್ಯಮಂಥನದಿಂದ ನವನೀತವೇನಾದರೂ ಹೊರಟರೆ ಅದು ಪುರುಷ-ಪ್ರಕೃತಿಗಳ ರಸವಾದಕ್ಕೂ, ಶಿವ-ಶಕ್ತಿಯರ ಜ್ಯೋತಿರ್ವಾದಕ್ಕೂ ಶಬ್ದಬ್ರಹ್ಮ ಶಬ್ದಮಾಯೆಯರ ಸ್ಫೋಟವಾದಕ್ಕೂ, ಲೀಲಾವತಾರದ ದೇವಜಾತಿವಾದಕ್ಕೂ ಹಸ್ತ್ಯದ್ರಸ್ತ್ಯವಾದೀತೆಂದು ನಾನು ನಂಬಿದ್ದೇನೆ.

(महाकवि श्री. द. रा. बेन्द्रे यांनी आपल्या साहित्यिक जीवनांतील कांही आठवणी येथें नमूद केल्या आहेत. त्यांत उत्तर कर्नाटकांतील बुद्धिजीवी वर्गाचा जीवन कलह प्रतिबिंबित झाला आहे.)

## कठीण शब्द

| | | |
|---|---|---|
| गडि | ಗಡಿ | सीमा |
| तावरे | ತಾವರೆ | कमळ |
| नेत्तर | ನೆತ್ತರ | रक्त |
| सिहि | ಸಿಹಿ | गोड, पक्वान्न |
| नाल्मोग | ನಾಲ್ಮೊಗ | चतुर्मुख |
| नेले | ನೆಲೆ | ठिकाण |
| जोताडु | ಜೋತಾಡು | हेलकावे खाणे |
| अेळताट | ಎಳತಾಟ | ओढाताण |
| साणिहिडि | ಸಾಣಿಹಿಡಿ | ( साण ) धार धरणे |
| उय्याले | ಉಯ್ಯಾಲೆ | पाळणा, झोपाळा |
| बदुकु | ಬದುಕು | जीवन |
| बुनादि | ಬುನಾದಿ | पाया |
| गद्दुगे | ಗದ್ದುಗೆ | सिंहासन |
| बीळ्कोडु | ಬೀಳ್ಕೊಡು | निरोप घेणे |
| तवरूरु | ತವರೂರು | माहेर |
| देगुल | ದೇಗುಲ | देउळ |
| पीळेगे | ಪಿಳಿಗೆ | पिढी |
| उप्पिनकायि | ಉಪ್ಪಿನಕಾಯಿ | लोणचे |

## धडा ३६ वा          ಮೂವತ್ತಾರನೆಯ ಪಾಠ

### ನನ್ನ ಇಪ್ಪತ್ತೊಮ್ಮರು ವರುಷಗಳು

ಆಗಿನ ನನ್ನ ಮನೆಯ ಸ್ಥಿತಿ ಹಾಗೂ ನನ್ನ ಮನಸ್ಥಿತಿ ಇವುಗಳ ವರ್ಣನೆಯನ್ನು ಮಾಡಿ ಮುಂದೆ ಸಾಗುವೆ.

ನನ್ನ ಮನೆತನದ ಸ್ಥಿತಿಯಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಿರಲಿಲ್ಲ. ಒಳ್ಳೆ ಕೈಗೆ ಬಂದ ಪ್ರಬುದ್ಧ ಸುಶಿಕ್ಷಿತ ಮಗನು ಮನೆತನದ ಸ್ಥಿತಿಗತಿಗಳತ್ತ ಲಕ್ಷ್ಯಗೊಡದೆ ಒಂದು ಕಾಸಿನ ಗಳಿಕೆ ಕೂಡ ಇಲ್ಲದ ಉದ್ಯೋಗಗಳಲ್ಲಿ ತೊಡಗಿದನಲ್ಲ ಎಂಬ ಮರುಕ ನನ್ನ ತಾಯ್ತಂದೆಗಳಿಗೆ, ನನ್ನ ಅಣ್ಣ ತಮ್ಮಂದಿರಿಗೆ ಇರುವದು ಸ್ವಾಭಾವಿಕ. ಇಷ್ಟೇ ಅಲ್ಲದೆ ಆ ದೇಶಸೇವೆಯ ಕ್ಷೇತ್ರದಲ್ಲಿ ಕಾಲಿಡುವುದೊಂದೇ ತಡ, ಸೆರೆಮನೆಯ ಹಾದಿಯನ್ನು ನಾನು ಹಿಡಿಯಬೇಕಾಯಿತಲ್ಲ ಎಂಬುದೂ ಒಂದು ಅವರ ಹೆಚ್ಚಿನ ಚಿಂತೆಗೆ ಕಾರಣವಾಯಿತು. ಉಳಿದವರಾರೂ ನನ್ನ ಆ ಕಾರ್ಯಕ್ರಮದ ಬಗ್ಗೆ ಮಾತಾಡುತ್ತಿರಲಿಲ್ಲ. ತಂದೆಯವರೇ ಒಮ್ಮೆ ಸಾಕಷ್ಟು ಧೈರ್ಯವಿದ್ದವರೇ ಈ ಕಾರ್ಯಕ್ಕೆ ಕೈಹಾಕಬೇಕು; ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆಯಲಿಕ್ಕಿಲ್ಲ. ಎಂಬ ನಿಶ್ಚಯ ಮಾಡಿಯೇ ಇಂಥ ಸಾಹಸವನ್ನು ಕೈಕೊಳ್ಳಬೇಕು ಎಂದು ನನ್ನನ್ನುದ್ದೇಶಿಸಿ ಹೇಳಿದ್ದರು.

ನನ್ನ ಕಾರ್ಯಕ್ಷೇತ್ರವು ಹೆಚ್ಚಾಗಿ ಧಾರವಾಡವೇ ಇದ್ದುದರಿಂದ ಮುಂದೆ ಮುಂದೆ ನಾನು ಮನೆಗೆ ಯಾವಾಗ ಬರುತ್ತಿದ್ದೆನೊ ಯಾವಾಗ ಹೋಗುತ್ತಿದ್ದೆನೋ, ಇದರ ಕಡೆಗೆ ಕೂಡ ಯಾರೂ ಲಕ್ಷ್ಯಗೊಡುತ್ತಿರಲಿಲ್ಲ! ನಾನು ಕೈ ಹಾಕಿದ ಕೆಲಸದ ಬಗ್ಗೆ ನನಗೆ ಮನೆಯಿಂದ ಅಂಥ ಪ್ರೋತ್ಸಾಹವಿತ್ತೆಂದು ಹೇಳಲಾರೆ. ಆದರೆ ಅಂಥ ಅಡ್ಡಿಯೂ ಇರಲಿಲ್ಲ. ತಂದೆ ತಾಯಿ ಅಣ್ಣ ತಮ್ಮಂದಿರು, ಅಕ್ಕ ತಂಗಿಯರು ಪ್ರತಿನಿತ್ಯ ನನಗೆ ಪ್ರತ್ಯಕ್ಷ ಇಲ್ಲವೆ ಚುಚ್ಚು ಮಾತುಗಳಿಂದ ಹೀಯಾಳಿಸಲಾರಂಭಿಸಿದ್ದರೆ, ಇಲ್ಲವೆ ನನ್ನ ಇತರ ಆಪ್ತ ಇಷ್ಟರು ನನ್ನನ್ನು ದೂಷಿಸಲಾರಂಭಿಸಿದ್ದರೆ ನನ್ನ ಮನಸ್ಸಿಗೆ ಬಹಳೇ ನೋವಾಗಬಹುದಾಗಿತ್ತು. ಆದರೆ ಅಂತಹದೇನೂ ನಡೆಯಲಿಲ್ಲ. ಇದೇ ನನ್ನ ಸೌಭಾಗ್ಯ.

ಇನ್ನು ನನ್ನ ಹೆಂಡತಿಯ ವಿಷಯ ಮತ್ತು ನನ್ನ ಅತ್ತೇಮನೆಯವರ ಮನಸ್ಥಿತಿ ಇವುಗಳನ್ನು ವರ್ಣಿಸುವುದಕ್ಕಿಂತ ಊಹಿಸುವುದೇ ಒಳಿತು. ಅನೇಕ ಸಾರೆ ನಾನು ಲಗ್ನ ಮಾಡಿಕೊಂಡದ್ದು ತಪ್ಪು ಎನಿಸುತ್ತಿತ್ತು. ದೇಶದ ಸ್ವಾತಂತ್ರ್ಯಕ್ಕಾಗಿ ನನ್ನಲ್ಲಿದ್ದ ತಳಮಳ ನನ್ನ ಹೆಂಡತಿಗೆ - ರಾಧಾಬಾಯಿಗೆ ಹೇಗೆ ತಿಳಿಯಬೇಕು? ಆಕೆಯ ತಾಯ್ತಂದೆಯವರಾಗಲಿ, ಅಣ್ಣನಾಗಲಿ ಆ ಬಗ್ಗೆ ಯಾವ ಪ್ರಯತ್ನವನ್ನೂ ಮಾಡಿರಲಿಲ್ಲ. ತುಂಬಿದ ತಾರುಣ್ಯದಲ್ಲಿ ಸಂಸಾರ ಮಾಡುವದನ್ನು ಬಿಟ್ಟು, ತನ್ನ ಹೆಂಡತಿಯ ಹೊಟ್ಟೆಬಟ್ಟೆಯ ಬಗ್ಗೆ ಸಹ ವ್ಯವಸ್ಥೆ ಮಾಡದೆ, ತಮ್ಮಿಬ್ಬರ ಹೊಟ್ಟೆಗೆ ಬೇಕಾದಷ್ಟು ಗಳಿಸದೆ, ಹಗಲಿರುಳು ಊರೂರಿಗೆ ತಿರುಗಾಡುವುದನ್ನು ನೋಡಿ ಯಾವ ಅತ್ತೇಮನೆಯವರು, ಯಾವ ಹೆಂಡತಿ ಉದ್ವಿಗ್ನರಾಗದೆ ಇರಬಲ್ಲರು? ಇನ್ನು ಆಕೆಗೆ ನಾನು ತಿಳಿವಳಿಕೆ ಹೇಳುವದಂತೂ ಸಾಧ್ಯವೇ ಇರಲಿಲ್ಲ. ಮನೆ ಗೆದ್ದು ಮಾರು ಗೆದೆಯಬೇಕು ಎಂಬ ಒಂದೇ ಮಾತಿನಲ್ಲಿ ಅವಳು ನನ್ನ ಬಾಯಿ ಕಟ್ಟಬಹುದಾಗಿತ್ತು. ನೆಹರೂ, ದೇಶಪಾಂಡೆ, ಕೌಜಲಗಿ ಮುಂತಾದವರ ಹೆಸರು ಹೇಳಿ ನಾನು ಅವರೆಲ್ಲರ ಸಮಾಧಾನ ಮಾಡುವದೂ ಸಾಧ್ಯವಿರಲಿಲ್ಲ. ಅವರು ವಕೀಲಿ ಮಾಡಿದರೇನು ಬಿಟ್ಟರೇನು, ಅವರು ಗಳಿಸಿದರೇನು ಬಿಟ್ಟರೇನು? ಅವರಿಗೆ ನಿಮಗೆ ಯಾವ ಸಾಟಿ? ಅವರಿಗೆ ಮನೆಮಾರಿದೆ, ಗಳಿಸಿದ ಗಂಟಿದೆ. ಅವರ ಹೆಂಡಂದಿರಿಗೆ ಏಕವಸ್ತ್ರೆಯರಾಗಿರುವ ಪ್ರಸಂಗವಿಲ್ಲ. ಮಡಿಸೀರೆಯ ಮೇಲೆಯೇ ಕಾಲ ಕಳೆಯುವ ದುರವಸ್ಥೆಯಿಲ್ಲ. ನೀವು ನಿಮ್ಮ ಹಾದಿಯನ್ನು ನೋಡಿಕೊಳ್ಳಬೇಕು. ಎರಡನೆಯವರ ಹೆಸರು ಹೇಳಿ ಏನು ಉಪಯೋಗ?

ವಸ್ತುಸ್ಥಿತಿ ಹೀಗೆ ಇದ್ದದು ನಿಜ. ಆಗ ನನ್ನ ಮನಸ್ಥಿತಿ ಹೇಗಿತ್ತು ಇದನ್ನು ಈಗ ಹೇಳುವದು ಸಹ ಕಠಿಣ. ನನ್ನ ಹೃದಯ ಅತ್ಯಂತ ಕಠೋರವಿರಲಿಕ್ಕೆ ಸಾಕು. ನನ್ನ ಸ್ವಂತ ಸುಖ-ದುಃಖದ ಬಗ್ಗೆ ನನ್ನ ದೇಹ ಮನಗಳ ನೆಮ್ಮದಿಯ ಬಗ್ಗೆ ನಾನು ಉದಾಸೀನನಾಗಿರುವದನ್ನು ತಿಳಿಯಬಲ್ಲೆ. ಆದರೆ ಮುಪ್ಪಿನ ಮನೆಯಲ್ಲಿ ಕಾಲಿಡಲನುವಾದ ತಾಯ್ತಂದೆಗಳ ಮನೋಭಾವನೆಗಳತ್ತ ನಾನು ದುರ್ಲಕ್ಷ್ಯ ಮಾಡುವದಾಗಲಿ, ಅವರ ಋಣವನ್ನು ತೀರಿಸುವದಕ್ಕಾಗಿ ಏನನ್ನೂ ಮಾಡದೆ ಇರುವದನ್ನಾಗಲಿ ನಾನು ಯಾವ ರೀತಿ ನ್ಯಾಯವಾದುದೆಂದು ಹೇಳಬೇಕು? ನಿರ್ದುಷ್ಟ ನಿರ್ಮಲ ಮನೋ

ಭಾವದಿಂದ ಒಬ್ಬ ನಿರಕ್ಷರ ಬಾಲಿಕೆಯು ವಿಶ್ವಾಸದಿಂದ ವಧುವಾಗಿ ನನ್ನ ಕೈ ಹಿಡಿದಳು. ಆಕೆಯನ್ನು ಹಿರಿಯರ ಆಶ್ರಯಕ್ಕೆ ಒಪ್ಪಿಸಿ ಸೀದಾ ಸೆರೆಮನೆಗೆ ಒಯ್ಯುವ ಹಾದಿಯನ್ನು ನಾನು ಹಿಡಿಯುವದು ಯಾವ ನ್ಯಾಯ?

ಆದರೆ ಹೀಗೆಲ್ಲ ಆಗ ನಡೆದು ಹೋಯಿತು. ನನ್ನೊಬ್ಬನ ವಿಷಯವೇ ಹೀಗಿತ್ತು ಎಂದಲ್ಲ. ದೇಶದ ತುಂಬ ಇಂತಹ ಸಾವಿರಾರು ಉದಾಹರಣೆಗಳು ಕದಾಚಿತ್ ಇದಕ್ಕೂ ಕಠೋರವಾದ ಘಟನೆಗಳು ಆಗ ಸಂಭವಿಸಿದವು. ಈಗ ಅವು ಕಲ್ಪಿತ ಕತೆಗಳೆಂದು ಭಾಸವಾದರೂ ಅವೆಲ್ಲ ನಿಜ ಸಂಗತಿಗಳು. ಪ್ರತ್ಯಕ್ಷ ನಡೆದ ಮಾತುಗಳು. ಇವುಗಳನ್ನೆಲ್ಲ ಈಗ ನೆನೆಸಿಕೊಂಡರೆ ನನ್ನ ಕಠೋರತನ ಎಷ್ಟು ಎದ್ದು ಕಾಣುವದೋ ಅಷ್ಟೇ ನನ್ನ ಮನೆತನದವರ ಔದಾರ್ಯ, ಕ್ಷಮಾಶೀಲತೆ, ಸಹಿಷ್ಣುತೆ ಇವು ನಮ್ಮ ಮನಸ್ಸನ್ನು ಸೆಳೆಯುವವು. ಅಷ್ಟೇ ನನ್ನ ಅತ್ತೇಮನೆಯವರ ಸಹನಶೀಲತೆ ಮತ್ತು ನನ್ನ ಪ್ರೀತಿಯ ಧರ್ಮಪತ್ನಿಯ ಧೀರಭಾವ ಇವು ಕಂಗೊಳಿಸುವವು. ಇತ್ತೀಚಿನ ಭಾರತೀಯ ಇತಿಹಾಸದಲ್ಲಿಯ ವೀರಯುಗವದು - ಗಾಂಧಿಯುಗವದು. - ೧೯೨೦-೪೭ರ ವರೆಗಿನ ಕಾಲವು ನಿಜವಾಗಿಯೂ ಅಂಥ ಯುಗವು. ಆಯಾ ಯುಗಕ್ಕೆ ಉಚಿತವಾದ ಹಾಗೂ ಅವಶ್ಯವಿದ್ದ ಗುಣಗಳು ಆಯಾ ಕಾಲದಲ್ಲಿ ವ್ಯಕ್ತವಾದುದು ಆಶ್ಚರ್ಯವಲ್ಲ!

**ಅದೊಂದು ಒಳಸಂಚು**

ಧಾರವಾಡ ಜಿಲ್ಲೆಯಲ್ಲಿಯ ಕಾಂಗ್ರೆಸ್ ಹಾಗೂ ಖಿಲಾಫತ್ ಚಳವಳಿಯನ್ನು ಹತ್ತಿಕ್ಕಬೇಕೆಂಬ ವಿಚಾರ ಸರಕಾರಿ ಅಧಿಕಾರಿಗಳ ಮನಸ್ಸಿನಲ್ಲಿರುವುದು ಸ್ವಾಭಾವಿಕ. ಆದರೆ ಒಂದು ದೊಡ್ಡ ಒಳಸಂಚಿನ ಸ್ವರೂಪವೇ ಅದಕ್ಕೆ ಬಂದುಬಿಟ್ಟಿತು. ಜೂನ್ ೩೦ನೇ ದಿನ ನಡೆದ ಪಿಕೆಟಿಂಗ್ ಬಹಳ ಉಗ್ರವಾಗಿತ್ತೆಂಬಲ್ಲಿ ಸಂಶಯವಿಲ್ಲ. ಅದೇ ದಿನ ಇಬ್ಬರು ಖಿಲಾಫತ್ ಸ್ವಯಂಸೇವಕರಿಗೆ ಪಿಕೆಟಿಂಗ್ ಮಾಡಿದ ನೆವದಿಂದ ಆರು ತಿಂಗಳ ಕಠೋರ ಶಿಕ್ಷೆ ವಿಧಿಸಿದ್ದೇ ಅದಕ್ಕೆ ಕಾರಣ. ಆದರೆ ಗೋಳಿಬಾರ ಮಾಡುವಂಥ ಪ್ರಸಂಗವು ಬಂದುದು ಪೋಲಿಸರ ಹಾಗೂ ಅಧಿಕಾರಿಗಳ ಉದ್ಧಾಮ ವೃತ್ತಿಯ ಮೂಲಕವೇ ಹೊರತು ವಸ್ತುಸ್ಥಿತಿ ಮೂಲಕವಲ್ಲ.

ಆ ದಿನ ಪಿಕೆಟಿಂಗ್ ನಡೆಯಿತು. ಅಲ್ಲಿ ಕಾಂಗ್ರೆಸ್ ಖಿಲಾಫತ್ ಮುಖಂಡರೆಲ್ಲ ಹಾಜರಿದ್ದರು. ಅವರು ಬೆಂಕಿ ಹಚ್ಚಿರಿ, ಕಲ್ಲೆಸೆಯಿರಿ, ಲೂಟಿ ಮಾಡಿರಿ, ಕೊಲ್ಲಿರಿ ಎಂದು ಜನರಿಗೆ ಪ್ರೋತ್ಸಾಹ ಕೊಟ್ಟರು. ಆದುದರಿಂದ ಗಡಂಗದೆದುರಿಗೆ ಇವೆಲ್ಲ ಗುನ್ಹೆಗಳಾದವು. ಎಂಬುದೇ ಪೋಲೀಸರ ವರದಿಯಾಗಿತ್ತು !

ಆದರೆ ಮರುದಿನ ಹಾಗೂ ಮುಂದೆ ಎರಡು ಮೂರು ದಿನಗಳಲ್ಲಿ ಪೋಲೀಸರು ಸೆರೆಹಿಡಿದ ಜನರ ಯಾದಿಯನ್ನು ನೋಡಿದರೆ ಅವರಲ್ಲಿ ಒಬ್ಬೊಬ್ಬರು ಸ್ವಯಂಸೇವಕರು ಮಾತ್ರ ಪಿಕೆಟಿಂಗ್‌ದಲ್ಲಿ ಎಂದಿನಂತೆ ಭಾಗವಹಿಸಿದ್ದರು ಹೊರತು ಇನ್ನಾರೂ ಆ ಗಡಂಗದತ್ತ ಹಾಯ್ದಿರಲಿಲ್ಲ! ನಾವು ನಾಲ್ಕಾರು ಜನರಂತೂ ಸಭೆಯಲ್ಲಿ ವರದಿ ಹೇಳುತ್ತ ಮಾತನಾಡುತ್ತಿದ್ದೆವು. ಗುತ್ತಲ ಗೋವಿಂದಾಚಾರ್ಯರು ತಮ್ಮ ಕೈ ನೋವಿನ ಮೂಲಕ ಮನೆಯಲ್ಲಿ ಮಲಗಿದ್ದರು. ಸರಕಾರಿ ವರದಿಯ ಪ್ರಕಾರವೇ ಮುದವೀಡು ಕೃಷ್ಣರಾಯರು ಆ ದಿನ ಆ ಕ್ಷಣಕ್ಕೆ ೨೮-೩೦ ಮೈಲಿನ ಮೇಲೆ ಸಭೆಯಲ್ಲಿ ಮಾತನಾಡುತ್ತಿದ್ದರು!

ಹೀಗೆಲ್ಲ ಇದ್ದರೂ ಧಾರವಾಡ ಜಿಲ್ಲಾ ಕಾಂಗ್ರೆಸ್ಸಿನ ಮುಖ್ಯ ಮುಖ್ಯ ಕಾರ್ಯಕರ್ತರು ಹಾಗೂ ಖಿಲಾಫತ್ ಚಳವಳಿಯ ಮುಖ್ಯಸ್ಥರಾದ ಖಿಲಾಫಿ ಅಬ್ದುಲ್ಲಾ ಸಾಹೇಬ ಮುಂತಾದವರು, ಭಿಸೆ ಇತ್ಯಾದಿ ಕೂಡಿ ೨೮ ಜನರನ್ನು ಪೋಲೀಸರು ಸೆರೆಹಿಡಿದು ಅವರ ಮೇಲೆ ನೇಲ್ಕಾಣಿಸಿದ ಆಪಾದನೆಗಳನ್ನು ಹೇರಿದರು.

ಸೆರೆಹಿಡಿದ ಎಲ್ಲ ಜನರ ಯಾದಿಯನ್ನು ನೆನಪಿನಿಂದ ಕೊಡುವದು ಅಸಾಧ್ಯ. ಮುಂದೆ ಇದೆಲ್ಲ ಚರಿತ್ರವನ್ನು ಪುಸ್ತಕರೂಪದಿಂದ ಪ್ರಕಟಿಸುವುದಾದರೆ ಆಗ ಪುಟ್ಟ ಪೂರಾ ಯಾದಿಯನ್ನು ಕೊಡಬಹುದು. ನನಗೆ ನೆನಪಿದ್ದಂತೆ ದಾಬಡೆ ಅನಂತರಾವ, ಮಧ್ವರಾವ ಕಮಲಾಪುರ, ಮಧ್ವರಾವ ಕಬ್ಬೂರ, ಮುದವೀಡು ವೆಂಕಟರಾವ, ಮುದವೀಡು ಕೃಷ್ಣರಾವ, ಗುತ್ತಲ ಗೋವಿಂದಾಚಾರ್ಯ, ದಾಮೂ ಹರ್ಣೀಕರ, ದೇಸಾಯಿ ಹಣಮಂತರಾವ, ದೇಶಪಾಂಡೆ ಗೋಪಾಳರಾವ, ಖಿಲಾಫಿ ಅಬ್ದುಲ್ಲಾ, ಲಂಗೋಟಿ, ನಾಸಿಯಾರ, ಸುಲ್ತಾನ್ ಮಾಸ್ತರ, ನರಸಿಂಗರಾವ್ ಭಿಸೆ ಇತ್ಯಾದಿ.

## ಪ್ರಚಂಡ ಜಾಗ್ರತಿ

ಧಾರವಾಡದ ಜಿಲ್ಲಾಧಿಕಾರಿಗಳಿಗೇನೋ ತಾತ್ಕಾಲಿಕ ಸಮಾಧಾನ ವೆನಿಸಿರಬಹುದು. ಗೋಳಿಬಾರಿನಿಂದ ಮೂವರನ್ನು ಕೊಂದುದು, ೨೦-೨೫ ಜನರನ್ನು ಗಾಯಗೊಳಿಸಿದುದು, ೨೮ ನಿರಪರಾಧಿ ಜನರನ್ನು ಸೆರೆ ಹಿಡಿದುದು, ಅವರ ಮೇಲೆ ಹೀನ ಅಪರಾಧಗಳ ಆಪಾದನೆ ಹೊರಿಸಿದುದು ಸಣ್ಣ ಶೌರ್ಯದ ಕೆಲಸವೇ?

ಆದರೆ ಇದರ ಪರಿಣಾಮವೇನಾಯಿತು? ಧಾರವಾಡ ಜಿಲ್ಲೆಯ ಜನರಲ್ಲಿ ಪ್ರಚಂಡ ಜಾಗ್ರತಿಯಾದುದಲ್ಲದೆ ಇಡೀ ಭಾರತದಲ್ಲಿ ವಿದ್ಯುತ್ ಸಂಚಾರದಂತೆ ಈ ಸುದ್ದಿ ಹಬ್ಬಿತು. ಅಲ್ಲದೆ ಬ್ರಿಟಿಷ್ ಅಧಿಕಾರಿಗಳು ಎಂಥ ಹೇಯವಾದ ಕೆಲಸವನ್ನೂ ಮಾಡಲೂ ಹೇಸುವದಿಲ್ಲ ಎಂಬುದರ ಪ್ರತೀತಿ ಜನರಿಗೆ ಆಯಿತು! ದೇಶದ ಎಲ್ಲ ಪತ್ರಿಕೆಗಳಲ್ಲಿ ಈ ಹೇಯವಾದ ವರ್ತನೆಯ ಬಗ್ಗೆ ಆಯಾ ಅಧಿಕಾರಿಗಳ ಕಠೋರ ಟೀಕೆ ಬಂದಿತು.

ಗಾಂಧಿ ಮೊದಲು ಮಾಡಿ, ನಾಲವೀಯ ಮುಂತಾದ ಸೌಮ್ಯ ಭಾರತೀಯ ಮುಖಂಡರ ವರೆಗೆ ಎಲ್ಲರೂ ಅಧಿಕಾರಿಗಳ ದುಷ್ಟ ಕೃತ್ಯ ವನ್ನು ನಿಃಶಸ್ತ್ರ ಜನಜಂಗುಳಿಯ ಮೇಲೆ ಅವರು ಎಸೆದ ಗುಂಡಿನ ಸುರಿ ಮಳೆಯನ್ನು, ಮುಂದೆ ಮುಖಂಡರನ್ನೆಲ್ಲ ಸೆರೆ ಹಿಡಿದುದನ್ನು ಖಂಡಿಸಿದರು.

ಇದಾವುದಕ್ಕೂ ಸೊಪ್ಪು ಹಾಕದ ಮದಾಂಧ ಅಧಿಕಾರಿಗಳು ತಮ್ಮ ಕಾಯಕವನ್ನೇ ಮುಂದೆ ನಡೆಸಿದರು ಹಾಗೂ ಹಲವಾರು ದುಷ್ಟ ಆಪಾದನೆಗಳನ್ನು ಹೇರಿ ಎಲ್ಲರ ಮೇಲೆ ಖಟ್ಲೆ ಹಾಕಿದರು.

ಜನಸಾಮಾನ್ಯರಲ್ಲಿ ಮಾತ್ರ ಈ ಬಗ್ಗೆ ಅತ್ಯಂತ ಅಸಂತೋಷವು ಉಂಟಾದುದಲ್ಲದೆ ಅಧಿಕಾರಿಗಳ ಬಗ್ಗೆ ತಿರಸ್ಕಾರ ಉಂಟಾಯಿತು. ಜನರು ಭಯದಿಂದ ಬೆದರಿ ಹೋಗಬಹುದೆಂದು ಅಧಿಕಾರಿಗಳು ಬಗೆದಿದ್ದರು. ಆದರೆ ತದ್ವಿರುದ್ಧ ಜನರು ನಿರ್ಭಯ ವೃತ್ತಿಯಿಂದ ಆಪಾದಿತರ ಗೌರವ ವನ್ನು ಮಾಡಲಾರಂಭಿಸಿದರು. ಜಯಘೋಷವನ್ನು ಮಾಡುತ್ತ ತಮ್ಮ ಪ್ರೇಮಾದರಗಳನ್ನು ವ್ಯಕ್ತ ಮಾಡಿದರು.

( कर्नाटकाचे प्रसिद्ध पुढारी श्री. रं. रा. दिवाकर यांनी या शतकाच्या सुरवातीपासून राष्ट्रीय चळवळीचा आढावा घेतला आहे. त्यांत देशभक्तांची दैन्यावस्था चित्रित असून त्यागी पदवीधरांच्या वैवाहिक जीवनाचे पडसादही आहेत. )

## शब्दार्थ

| | | |
|---|---|---|
| गळिके | ಗಳಿಕೆ | कमाई |
| कासु | ಕಾಸು | पै–पैसा |
| हेज्जे | ಹೆಜ್ಜೆ | पाऊल |
| अड्डि | ಅಡ್ಡಿ | हरकत |
| चुच्चुमातु | ಚುಚ್ಚುಮಾತು | टोमणे |
| नोवु | ನೋವು | दुःख |
| हेंडति | ಹೆಂಡತಿ | बायको, पत्नी |
| ऊहिसु | ಊಹಿಸು | तर्क करणे |
| अत्तेमने | ಅತ್ತೇಮನೆ | सासर |
| मनेगेद्द् मारु गेदेय बेकु | ಮನೆಗೆದ್ದು ಮಾರುಗೆದೆಯ ಬೇಕು | आधी संसार करावा नेटका नंतर परमार्थ |
| नेम्मदि | ನೆಮ್ಮದಿ | सुख |
| कंगोळिसु | ಕಂಗೊಳಿಸು | शोभणे |
| ओळसंचु | ಒಳಸಂಚು | कट |
| गडंग | ಗಡಂಗ | दारूचा अड्डा |
| आपादने | ಆಪಾದನೆ | आरोप |
| गायगोळिसु | ಗಾಯಗೊಳಿಸು | जखमी करणे |
| हेसु | ಹೇಸು | खंत वाटणे |
| सोप्पुहाकु | ಸೊಪ್ಪುಹಾಕು | भीक घालणे |



## ಧಡಾ ೩೭ ವಾ    ಮೂವತ್ತೇಳನೆಯ ಪಾಠ

### ನಮ್ಮ ನಗೆಮಾತು

### ನಿಂದಕರಿರಬೇಕು

ನಿಂದಕರಿರಬೇಕಿರಬೇಕು ಎಂದು ಪುರಂದರದಾಸರು ಹಾಡಿದ್ದಾರಲ್ಲ-ಇದು ಬಂಗಾರದ ಅಕ್ಷರಗಳಲ್ಲಿ ಬರೆದು ಕಟ್ಟು ಹಾಕಿಸಿಡಬೇಕಾದ ಹಾಡು. ಪುರಂದರದಾಸರು ಬೇಡ ಅಂದಿದ್ದರೂ ನಿಂದಕರು ಇದ್ದೇ ಇರುತ್ತಿದ್ದರು. ಏಕೆಂದರೆ ನಿಂದೆ ಎಂಬುದು ಭಾಷೆಯಷ್ಟೇ ಹಳೆಯದು. ಭಾಷೆ ಹುಟ್ಟಿದ್ದೇ ನಿಂದೆಗಾಗಿ ಎಂದು ನನ್ನ ಮತ. ಆಚೆ ಗುಹೆಯಲ್ಲಿದ್ದವನ ಹೆಂಡತಿಯ ಚರ್ಯೆಯ ವಿಷಯವಾಗಿ ಈಚೆ ಗುಹೆಯಲ್ಲಿದ್ದವಳಿಗೆ ತನ್ನ ಗೆಳತಿಯ ಸಂಗಡ ಏನೋ ಕೆಟ್ಟ ವಿಷಯ ತಿಳಿಸಬೇಕು ಅನಿಸಿದಾಗ ಮೊದಲ ಶಬ್ದಗಳು ಹುಟ್ಟಿದವು. ಆದ್ದರಿಂದಲೇ ನಾವು ಮಾತೃಭಾಷೆ ಎನ್ನುವುದು. ಭಾಷೆಯನ್ನು ಹೆಂಗಸೇ ಹುಟ್ಟಿಸಿದಳು ಎಂದು ಇದು ಸಾಕ್ಷಿ ಹೇಳುತ್ತದೆ. ಹಾಗೆ ನಿಂದೆಗಾಗಿ ಹುಟ್ಟಿದ ಭಾಷೆಯನ್ನು ಬೇರೆ ಕೆಲಸಗಳಿಗೂ ಉಪಯೋಗಿಸತೊಡಗಿದರು ಎಂಬ ಮಾತು ಬೇರೆ.

ನಿಂದೆ ಎಂಬುದು ಯಾವ ದೇಶದಲ್ಲೇ ಆದರೂ ದೊಡ್ಡ ರಾಷ್ಟ್ರೀಯ ಉದ್ದಿಮೆ. ನಮ್ಮ ದೇಶದಲ್ಲಂತೂ ಅದು ಅತಿ ದೊಡ್ಡ ಉದ್ದಿಮೆಯೇ ಸೈ. ಇದು ಒಂದು ಗೃಹೋದ್ಯಮ. ಗೃಹಿಣಿಯರು ಯಾವುದಾದರೊಂದು ಉದ್ದಿಮೆಯಲ್ಲಿ ಹಿರಿಮೆ ಗಳಿಸಿದ್ದರೆ ಇದರಲ್ಲಿ. ಮತ್ತೆ ಪುರುಷರು ಇದರಲ್ಲಿ ಸ್ವಲ್ಪ ಹಿಂದುಳಿದಿದ್ದರೆ ಅವರಿಗೆ ವೇಳೆ ಸ್ವಲ್ಪ ಕಡಿಮೆ ಇರುವುದೇ ಕಾರಣವಲ್ಲದೆ ನಿಂದಾಪ್ರೀತಿ ಕಡಿಮೆಯಾಗಿರುವುದು ಕಾರಣವಲ್ಲ. ಆದರೆ ನಿಂದಾಕಲೆಯಲ್ಲಿ ಸ್ತ್ರೀ ಪುರುಷರನ್ನು ಹೋಲಿಸಿದರೆ ಪುರುಷ ಸ್ತ್ರೀಯನ್ನು ಎಂದೂ ಸರಿಗಟ್ಟಲಾರ ಎಂದು ಖಚಿತವಾಗುತ್ತದೆ. ಪುರುಷನ ನಿಂದೆ ಒರಟು, ಟೊಳ್ಳು ಪಾತ್ರದ ಹಾಗೆ ಬಹಳ ಸಪ್ಪಳ ಮಾಡುವಂಥಾದ್ದು. ಆದರೆ ಅದು ವಿರಳವಾಗಿಯೆ ಹೃದಯದ ಹತ್ತಿರ ಹೋಗುತ್ತದೆ. ಸ್ತ್ರೀಯದು ಹಾಗಲ್ಲ. ನಾಜೂಕಾಗಿ ಬಿಟ್ಟ ಬಾಣದ ಹಾಗೆ ಹೋಗಿ ಅದು ನೇರವಾಗಿ ಹೃದಯವನ್ನು ಹೊಕ್ಕು ಅಲ್ಲಿ ಸಿಕ್ಕಿಕೊಳ್ಳುತ್ತದೆ. ನಲ್ಲಿಯ ಬಳಿ ಸೇರಿದ ಸಾಮಾನ್ಯ ಸ್ತ್ರೀಯರ ಬಗಳದಲ್ಲಿ ಕೂಡ ಹೊರಹೊಮ್ಮುವ ನಿಂದೆಗಳ

ಸ್ವರದ ಸೂತ್ರ ಮಾರ್ಮಿಕತೆ, ಶಬ್ದಗಳ ಮಿತಿ, ಅರ್ಥದ ಕೂರ್ಪು ನೋಡಿ ನಾನು ಬೆರಗಾಗಿದ್ದೇನೆ. ದನಿಯು ಕೂಡ ಹಾವಿನಂತೆ ವಕ್ರವಕ್ರವಾಗಿ ಹರಿಯಬಲ್ಲದೆಂಬುದನ್ನು ನಾನು ನಲ್ಮೆ ಕಲಹದಲ್ಲೇ ಗಮನಿಸಿದುದು.

ನಿಂದೆಯ ವಿಷಯದಲ್ಲಿ ಒಂದು ಸ್ವಾರಸ್ಯದ ಸಂಗತಿಯೆಂದರೆ, ನಿಂದೆಗೆ ಪಾತ್ರನಾದವನಲ್ಲಿ ಅವಗುಣವೇನೂ ಇರಬೇಕೆಂದಿಲ್ಲ; ಅವನು ನಿಮಗಿಂತ ಬೇರೆ ಆಗಿದ್ದರೆ ತೀರಿತು. ನಿಂದಕರಿರಬೇಕೆಂದು ಆತುರ ಪಟ್ಟ ಪುರಂದರ ದಾಸರೇ ತಕ್ಕ ಮಟ್ಟಿನ ನಿಂದಕರೂ ಆಗಿದ್ದರು. "ಅದ್ವೈತಿಗಳ ಕಾಲಲೊದ್ದು" ಎಂದು ಅವರು ಕೆಲವು ಶಾಶ್ವತ ಸತ್ಯಗಳನ್ನು ಸಾರಿದ್ದಾರೆ. ಅದ್ವೈತಿಗಳ ನಂಬಿಕೆ ಪುರಂದರ ದಾಸರ ನಂಬಿಕೆಗಿಂತ ಬೇರೆಯಾಗಿದ್ದುದು ಹೊರತು ಅವರಲ್ಲಿ ಬೇರೇನೂ ತಪ್ಪು ಕಾಣಿಸುವುದಿಲ್ಲ. ಮೈಸೂರು ಸೇರಿ ಕರ್ನಾಟಕ ಏಕೀಕರಣವಾಗಬೇಕೆಂದು ತರುಣ ಪತ್ರಿಕೋದ್ಯಮಿಯೊಬ್ಬನು ಮೈಸೂರಿನ ಸಾಹಿತ್ಯಾಚಾರ್ಯರೊಬ್ಬರ ಮುಂದೆ ಹೇಳಿದಾಗ "ಉತ್ತರ ಕರ್ನಾಕದಲ್ಲೇನಿದೆ? ಓದೋಕ ರೈಲ್ವೆ ಗೈಡು, ತಿನ್ನೋಕೆ ಭಕ್ಕರಿ" ಎಂದರಂತೆ. ಬೇಂದ್ರೆ, ಶ್ರೀರಂಗರಂಥ ಸಾಹಿತಿಗಳು ಆಗಲೆ ಪ್ರಸಿದ್ಧರಾಗಿದ್ದ ಕಾಲದಲ್ಲಿ ಬಂದ ಮಾತು ಇದು. ಆಚಾರ್ಯ ಪುರುಷರು ಈ ಮಹನೀಯರನ್ನು ಓದಿರಲಿಲ್ಲ, ಮತ್ತು ಭಕ್ಕರಿ ತಿಂದು ಅರಗಿಸಿಕೊಳ್ಳುವ ಶಕ್ತಿ ಅವರಿಗಿದ್ದಿಲ್ಲ ಎಂಬುದು ಹೊರತು ಅವರ ನಿಂದೆಗೆ ಬೇರೆ ಕಾರಣವೇನೂ ಇಲ್ಲ.

ಕರ್ನಾಟಕದವರು ನಾವು ಮಹಾರಾಷ್ಟ್ರೀಯರನ್ನು ಜಿಪುಣರೆಂದು ನಿಂದಿಸುತ್ತೇವೆ. "ಪುಣೇರಿ"ಯ ಆಸೆಬುರುಕತನ ಕತೆಕತೆಯಾಗಿ ಹಬ್ಬಿದೆ. ಕನ್ನಡ ಭಾಷೆಯೆಂಬುದು ಗಡಿಗೆಯೊಳಗೆ ಕಲ್ಲು ಹಾಕಿ ಅಲುಗಿಸಿದಂತಿದೆಯೆಂದು ಮರಾಠಿ ಗಡಕರಿ ನಕ್ಕಿದ್ದಾನೆ. ಅವನಿಗೆ ಕನ್ನಡ ತಿಳಿಯುತ್ತಿರಲಿಲ್ಲ ಅಷ್ಟೇ. ತಮಿಳರಿಗೆ ಕರ್ನಾಟಕ ಎಂದರೆ ಮೋಸವೆಂದೇ ಅರ್ಥ. ಕನ್ನಡಿಗರಾದರೋ ತಿಗುಳರಿಗಿಂತ ನೀಚರು ಯಾರೂ ಇರಲಾರರೆಂದು ಭಾವಿಸುತ್ತಾರೆ. ಇಂಗ್ಲೀಷರು ಅಂಗಡಿಕಾರರ ಜನಾಂಗ ಎಂದು ತೆಗಳಿದ ನೆಪೋಲಿಯನ್ ಇಂಗ್ಲಿಷರಿಂದಲೇ ಸೋತು ದ್ವೀಪವಾಸಿಯಾಗಬೇಕಾಯಿತು. ಬ್ರಾಹ್ಮಣೋ ಭೋಜನಪ್ರಿಯಃ ಎಂದು ನಗೆಯಾಡುವ

ಇತರ ಜಾತಿಗಳೆಲ್ಲ ನಾಲಿಗೆ ರುಚಿ ಅರಿಯದ ನಿಷ್ಪ್ರಯೋಜಕರೆಂದು ಬ್ರಾಹ್ಮಣರು ಜರೆಯುತ್ತಾರೆ.

ಮತ್ತೆ ನೀನಾದರೇನು? ನಿಂದೆಯು ಅಚಾರ್ಯನಲ್ಲವೆ? ಎಂದು ಕೇಳುತ್ತೀರಿ. ಹೌದು. ನಿಂದೆಯಿಲ್ಲದ ಪ್ರಪಂಚದಲ್ಲಿ ಬದುಕುವುದರಲ್ಲಿ ಸ್ವಾರಸ್ಯವಿಲ್ಲೆಂದೇ ನನ್ನ ಮತ. ಅದು ನಮ್ಮೊಳಗಿನ ವಿಷವನ್ನು ಹೊರಗೆಡಹುವ ಉತ್ತಮ ಸಾಧನ.

[ "निंदकाचे घर असावे शेजारी" या तुकोबारायांच्या उक्ती सारखेच "निंदक-रिरबेकिरबेकु" असे श्री. पुरंदर दासांचे प्रसिद्ध पद आहे. त्याच शैलींत "लांगूलाचार्यांचा निबंधसदृश लेख प्रचलित विषयावर झगझगीत प्रकाश पाडणारा आहे )

### शब्दार्थ

| | | |
|---|---|---|
| बंगार | ಬಂಗಾರ | सोने–सोनेरी |
| कट्टु | ಕಟ್ಟು | चौकट, 'फ्रेम' |
| उद्दिमे | ಉದ್ದಿಮೆ | उद्योग, उद्यम, कारखानदारी |
| होलिसु | ಹೋಲಿಸು | तुलना करणे |
| टोळ्ळु | ಟೊಳ್ಳು | पोकळ |
| सप्पळ | ಸಪ್ಪಳ | आवाज |
| नल्लि | ನಲ್ಲಿ | नळ |
| बेरगागु | ಬೆರಗಾಗು | आश्चर्य वाटणे |
| गमनिसु | ಗಮನಿಸು | ध्यानांत घेणे |
| नंबिके | ನಂಬಿಕೆ | श्रद्धा |
| तप्पु | ತಪ್ಪು | चूक, खोटे |
| भक्करि | ಭಕ್ಕರಿ | भाकर |
| अरगिसु | ಅರಗಿಸು | पचविणे |
| जिपुण | ಜಿಪುಣ | कंजूष |
| आसेबुरुक | ಆಸೆಬುರುಕ | लोभी |
| मोस | ಮೋಸ | फसवणूक |
| तिगुळ | ತಿಗುಳ | दक्षिणेतील एक जमात |
| अंगडिकार | ಅಂಗಡಿಕಾರ | व्यापारी |
| नालिगे | ನಾಲಿಗೆ | जीभ |

ಘಟಾ ೩೮ ವಾ ಮೂವತ್ತೆಂಟನೆಯ ಪಾಠ

## ಅರುವತ್ತೈದರ ಖಾರಂತರು

ಎಳೆ ಹರೆಯದಲ್ಲಿ ನೂರು ಕನಸುಗಳು. ಭೃಂಗದ ಬೆನ್ನೇರಿ ಕಾಲ ಯಾಪನ. ಒಂದು ದಿನ ಇದ್ದಕಿದ್ದ ಹಾಗೆ ಅಚ್ಚರಿ: ಮಧ್ಯ ವಯಸ್ಸಿಗೆ ಕಾಲಿಟ್ಟಿನಲ್ಲ! ಹಿಂದೆ ತಿರುಗಿ ನೋಡಿ, ಲೆಕ್ಕ ಹಾಕಿ, ಮುಂದೆ ಇನ್ನು ಎಷ್ಟಿದೆ ಎಂದು ತಿಳಿಯುವ ತವಕ. ಯಾವ ನೆಲೆಗೆ ಬಂದು ನಿಂತ ಹಾಗಾಯಿತು ಬದುಕಿನ ಜಟಕಾ ಬಂಡಿ? ('ಎಷ್ಟೋ ಕಾಲ ವ್ಯರ್ಥವಾಯಿತಲ್ಲ! ಸ್ವಲ್ಪ ವಿವೇಚನೆಯಿಂದೆ ಗಾಡಿ ಓಡಿಸಿದ್ದರೆ.') ದಾರಿ ಟಾರು ರಸ್ತೆಯಲ್ಲ, ಆದರೂ ಅಶ್ವಶಕ್ತಿ ಸಾಕಷ್ಟಿದೆ. ತಾನು ನೋಡಬಯಸುವ ಬದುಕಿನ ಕೈಕಂಬಗಳನ್ನು ಖಂಡಿತ ದಾಟಬಹುದು. ಹತ್ತು ಸವುಸ್ತರ ಕರ ತಾಡನವಿದ್ದರೆ ಕುದುರೆಯ ಬೆನ್ನು ಚಪ್ಪರಿಸಿದಂತೆ. ಕರಗಿದ ಭ್ರಮೆಗಳು, ಮುರಿದ ಸೇತುವೆಗಳು 'ಎಚ್ಚರ! ಎಚ್ಚರ!' ಎನ್ನುತ್ತಿವೆಯಲ್ಲ? ಈ ವರೆಗಿನ ಸಾಧನೆಗಳನ್ನು ನಿಜಸ್ಥಿತಿಯ ಬೆಳಕಿನಲ್ಲಿ ತೂಗಿ ನೋಡುವುದಲ್ಲವೆ ಮೇಲು? ಯಾಕೋ, ಕಣ್ಣು ಮಂಜು, ಇನ್ನು ಕನ್ನಡಕ ಬೇಕು. ಆದರೆ ಇನ್ನೊಬ್ಬರದಲ್ಲ, ತನ್ನದೆ. ಕಂಠ ಶೋಷಣೆ ಮಾಡಿ ಮಾಡಿ ಧ್ವನಿ ಒಡೆದಿದೆ. ಆದರೂ, ಬಳಲಿದ ಕಂಠದ ಮಾರ್ದವತೆ ಕಂಡು ತನಗೇ ವಿಸ್ಮಯ. ಜೀವನದುದ್ದಕ್ಕೂ ಕೆಡಕನ್ನು ಇದಿರಿಸಿದ್ದಾಯಿತು. ಅಲ್ಲಿ ಇಲ್ಲಿ ಇರುವ ಒಳ್ಳಿತನ್ನೂ ಸ್ವಲ್ಪ ಗುರುತಿಸುವುದು ಬೇಡವೆ? ಮಗುವಿನ ಮಂದಹಾಸ, ಅರಳು ಹೆಣ್ಣಿನ ಮಾದಕ ನಗೆ, ಮಿಸೆ ಕುಡಿಯೊಡೆಯುವ ವಸಂತ ಇವನ್ನೆಲ್ಲ ಮತ್ತೆ ಮತ್ತೆ ಕಾಣಬೇಕೆಂಬ ಆಸೆಯಾಗುತ್ತದಲ್ಲ?......

ಈಯೆಲ್ಲಾ ಅವಸ್ಥೆಗಳನ್ನು ಬ್ರಹ್ಮಾಂಡ ಜೀವನದ ಅಲ್ಪ ಕಣವಾದ ಮನುಷ್ಯ ದಾಟಲೇಬೇಕು. ಇದ್ದೀತು: ಒಬ್ಬೊಬ್ಬರದು ಒಂದೊಂದು ಬಗೆ ಆದರೂ ಅವಸ್ಥಾಂತರಗಳಿಂದ ಬಾಧಿತನಾಗದೆ ಇರುವ ವ್ಯಕ್ತಿ ದುರ್ಲಭ.

ಶಿವರಾಮ ಕಾರಂತರೂ ಮಾನವ ಸಹಜವಾದ ಈ ತಾಕಲಾಟಗಳಿಗೆ ಗುರಿಯಾಗಿರಬಹುದು. ಆದರೆ ಅವರ ಮುಖಭಾವ, ಒಳಗಿನ ವಲ್ಲಟಕ್ಕೆ ಕನ್ನಡಿಯಲ್ಲ. ಶ್ರೀಸಾಮಾನ್ಯನ ಪಾಲಿಗೆ ಅವರು ಯಾವಾಗಲೂ ನಟ ಭಯಂಕರನೇ: ಕಾರಂತರು ಯಾವಾಗಲೂ ಖಾರಂತರೇ. ಆ ಭಾವ

ನೆಯುನ್ನು ಸ್ಥಿರಗೊಳಿಸುವುದರಲ್ಲಿ ಅವರು ಅತ್ಯಂತ ಯಶಸ್ವಿ. ಆ ಶ್ರೇಷ್ಠ ನಟನೆಯಿಂದಲೇ ಅವರಿಗೆ ಅಮಿತ ಆನಂದ. ಮುಖವಾಡ ಧರಿಸಿದ ಕಾರಂತರ ವ್ಯಕ್ತಿತ್ವ ಸಾರಿ ಹೇಳುತ್ತದೆ; 'ನಾನು ತೆರೆದ ಪುಸ್ತಕ!'

* * *

ಆ ಪುಸ್ತಕವನ್ನು ಈ (ಮಂಗಳವಾರ) ಸಂಜೆ ಬೆಂಗಳೂರಿನ ಪುರ ಭವನದಲ್ಲಿ ಐವರು ಪ್ರಮುಖರು ಓದಿದರು. ಸಂದರ್ಭ ೬೫ ತುಂಬಿದ ಕಾರಂತರಿಗೆ ಸನ್ಮಾನ. ಸಭಾಂಗಣದ ಕೊನೆಯ ಸಾಲಿನಲ್ಲಿ ಕುಳಿತು ವೇದಿಕೆಯ ಮೇಲೆ ನಡೆದ ವಾಚನಕ್ಕೆ ನಾನು ಕಿವಿ ಗೊಟ್ಟೆ.

ಓದಿದವರೆಲ್ಲ ಕಾಲು ಶತಮಾನದಿಂದ ನನಗೆ ಪರಿಚಿತರೇ. ಅನಕೃ, ವಿನಾಯಕ, ರಾಜರತ್ನಂ, ರಾಶಿ; ಉತ್ಸವದ ಹಿರಿತನ ವಹಿಸಿದ್ದ ಮಾಸ್ತಿ; ನರೆಗೂದಲು, ಬೊಕ್ಕ ತಲೆ, ಬಚ್ಚ ಬಾಯಿ, (ಆಧುನಿಕ ಕನ್ನಡ ಸಾಹಿತ್ಯಕ್ಕೆ ಖಂಡಿತ ವಯಸ್ಸಾಯಿತು.) ಮೊನ್ನೆ ಮೊನ್ನೆ ಇವರನ್ನೆಲ್ಲ ಅವರವರ ಯೌವನಾವಸ್ಥೆಯಲ್ಲಿ ನೋಡಿದ್ದೆನಲ್ಲ? ಯಾವುದು ನಿಜ? ಒಂದೋ ಅದು ಕನಸು, ಇಲ್ಲವೆ ಇದು ಪ್ರಗತಿಶೀಲತೆಯ ಶೈಲಿನಲ್ಲಿ ಕೆಂಪು ಬಾವುಟ ಹಿಡಿದ ಯುವಕ ಗಾರ್ಡ- ಅನಕೃ; ಸಮುದ್ರದಾಚೆಯಿಂದ ತೇಲಿ ಬಂದ ವಿಶಿಷ್ಟ ದೇಶೀಯ-ವಿನಾಯಕ; ಸರಸ್ವತೀ ಮಂದಿರದ ಕಿರಿಯ ಮಹಂತ-ರಾಜರತ್ನಂ; ಅಧ್ಯಕ್ಷ ಕೈಲಾಸಂರನ್ನು ಮದರಾಸಿನ ಸಮ್ಮೇಳನಕ್ಕೆ ಕರೆತಂದ ಜನ್ನಸಿಗ-ರಾಶಿ; ನಾಡಿನ ಉದ್ದಗಲಕ್ಕೆ ಪರಿಷತ್ತಿನ ದಂಡನಾಯಕನಾಗಿ ಓಡಾಡುತ್ತಿದ್ದ, ಇತರರಿಗಿಂತ ಸುಮಾರು ಒಂದು ದಶಕದಷ್ಟು ಹಿರಿಯ ಮಾಸ್ತಿ...... ಆ ವ್ಯಕ್ತಿಗಳೇ ಇರಬಹುದೇ ಇವರು.?

ಸಂದೇಹಬೇಡ-ಎಂದುವು ಅಲೆಯಲೆಯಾಗಿ ಬಂದ ಧ್ವನಿಗಳು.

* * *

ಕಾರಂತ-ಪುಸ್ತಕವನ್ನು ಅವರು ಓದಿದ ರೀತಿ ಸಾರಿತು: ಇವರೆಲ್ಲ ಬುದ್ಧರು, ಪ್ರಬುದ್ಧರು, ಬೋಧಿ ವೃಕ್ಷದ ನೆರಳಿನಲ್ಲಿ ಸಾಕಷ್ಟು ಎವೆ ಮುಚ್ಚಿ ವಿಶ್ರಾಂತಿಪಡೆದವರು.

ಹೊಗಳಿಕೆಯ ನಾಟಕ? ಇದ್ದೀತು. ಶಿಷ್ಟಾಚಾರದ ಚೌಕಟ್ಟಿನಲ್ಲಿ ಚಿತ್ರಕ್ಕೆ ಲೇಪಿಸಲೇಬೇಕಾದ ಕೆಲವು ಬಣ್ಣಗಳಿವೆ. ಆದರೆ ಮೂಲ

ಚಿತ್ರವೇ ಸಾಕಷ್ಟು ವರ್ಣರಂಜಿತವಾಗಿರುವಾಗ ಬಾಯಿ ಮಾತಿನ ಬಣ್ಣನೆ ಸುಲಭ. ಮಾತುಗಳಿಗೆ ಹೃದಯದ ಆಳದಿಂದ ಬರುವ ಅಭ್ಯಾಸವಿಲ್ಲ ಎಂದಲ್ಲ. ಬದುಕಿನ ಮೂಸೆಯಲ್ಲಿ ಪುತ್ಥಳಿಯಾದ ವ್ಯಕ್ತಿತ್ವ ಬಹಳಷ್ಟು ಒಳ್ಳೆಯ ಮಾತನ್ನೇ ಆಡುತ್ತದೆ.

ಕನ್ನಡದ ಕರ್ಮಕಥೆಯೇ ಕಾರಂತ-ಪುಸ್ತಕ. ಇದು ದುರಂತವೋ, ಸುಖಾಂತವೊ? ಉತ್ತರಿಸುವವರ ದೃಷ್ಟಿಯನ್ನು ಅವಲಂಬಿಸಿದೆ, ಉತ್ತರ. ಆ ಪುಸ್ತಕದಿಂದ ಉದಿಸುವಬಿಂಬ ಮಾತ್ರ, ಕುದುರೆಮುಖ ಶಿಖರದಷ್ಟು ಎತ್ತರ. ಅದನ್ನು ಪರಿದಾಗಲೇ ವಿಶ್ವರೂಪ ದರ್ಶನ.

* * *

ಕಾರಂತರು ಮಹಾನ್ ವ್ಯಕ್ತಿ. ನಿರ್ವಿವಾದ.

ಒಬ್ಬ ವ್ಯಕ್ತಿ ಆ ಹಂತಕ್ಕೆ ಏರುವ ವಿಧಾನ ಯಾವುದು?

ಮನುಷ್ಯ ಎಷ್ಟೇ ದೊಡ್ಡವನಾದರೂ ಮನುಷ್ಯನೇ. ರಾಗದ್ವೇಷಗಳು ಅವನನ್ನು ಕಾಡುತ್ತವೆ. ಮಾನವ 'ಗುಣ'ಗಳು ಅವನ ನಡೆನುಡಿಗಳನ್ನು ರೂಪಿಸುತ್ತವೆ.

ಕಾರಂತರಲ್ಲಿ ವಿರೋಧಾಭಾಸಗಳು ಇರಲಿಲ್ಲ, ಇಲ್ಲ-ಎಂದಲ್ಲ. ಅನೇಕ ಸಲ ಎಡವಿದ ಆನೆಯೇ ಈ ನಾಡಾಡಿ, ಕಾಡಾಡಿ. ಜ್ಞಾನಾರ್ಜನೆ, ದುಡಿಮೆ ಇವರ ಪಾಲಿಗೆ ನಿತ್ಯದ ಉಸಿರು. ಪ್ರಯೋಗಶೀಲತೆಯೇ ಅವರ ಬೆಳವಣಿಗೆಯ ಬುನಾದಿ. ಅವರೆಷ್ಟೆ ನಿಷ್ಠುರಿಯಾಗಿದ್ದಾಗಲೂ ಜನ ತೋರಿದ ಅದರ ಒಲವುಗಳೇ ಅವರ ತಾಯತ.

ಹತ್ತು ಬೆಂಕಿಗಳಲ್ಲಿ ಹದಗೊಂಡೇ ಅವರು ಮಹಾನ್ ಉಕ್ಕಾಗಿದ್ದಾರೆ.

* * *

ರಾಜಕೀಯ ಭಾಷಣಗಳನ್ನು ದಿನನಿತ್ಯವು ಓದಿ ಕೇಳಿ ಬೇಸತ್ತ ನಾನು, ಸಾಹಿತ್ಯ ಸಂಸ್ಕೃತಿಗಳ ತಣುಪಿನ ಮೊರೆ ಹೋಗಲು ಬಯಸಿದ್ದೆ. ಆ ಶೀತಲ ಸ್ಪರ್ಶ ಅಪ್ಯಾಯಮಾನವಾಗಿತ್ತು.

ಕಾರಂತರು ಮಾತನಾಡಲು ಎದ್ದರು. ಇದ್ದಕ್ಕಿದ್ದಂತೆ ರಾಜಕೀಯದ ಕಾರ್ಮೋಡ ಕವಿಯಿತು. ಕಾರಂತರು ಗುಡುಗಾದರು, ಮಿಂಚಿದರು,

ಘೋಘೋ ಮಳೆ ಸುರಿದರು. ಅವರು ಅಭಿನಯಿಸಿದ್ದು ಈ ನಾಡಿನ ರಾಷ್ಟ್ರದ ನೊಂದ ನಾಗರಿಕನ ಪಾತ್ರವನ್ನು. ಆಡಿದ್ದು ಹೃದಯ ಸ್ಪರ್ಶಿಯಾದ ಮಾತು ಗಳನ್ನು.

ರಾಜಕೀಯದ ಬದನಿಕೆ ಸರ್ವವ್ಯಾಪಿಯಾಗಿತ್ತು.

ಸಮಾರಂಭದ ಯುವಕ ಸೂತ್ರಧಾರರಾದ ಮಾವಿನಕೆರೆ ರಂಗನಾಥನ್, ಗುಂಡ್ಮಿ ರಾಮಕೃಷ್ಣ ಐತಾಳ, ಸೂರ್ಯನಾರಾಯಣ ಚಡಗ, ನಾರಾಯಣ ಬಲ್ಲಾಳರು ಅಂಕದ ಪರದೆ ಸರಿಸಲು ಸಿದ್ಧರಾಗುತ್ತಿದ್ದಂತೆ, ನಾನು ಹೊರಬಂದು, ಪುರಭವನದ ಹೊರಗಣ ಬದುಕು ನಿತ್ಯದಂತೆಯೇ ಸಾಗಿದ್ದುದನ್ನು ಕಂಡೆ: ಸಿಗರೇಟು ಹಚ್ಚಿದೆ.

(श्री. निरंजन यानी श्री. शिवराम कारंत यांच्या व्यक्तिमत्वाबद्दल विचार प्रकट केले आहेत)

### कठीण शब्द

| | | |
|---|---|---|
| कनसु | ಕನಸು | स्वप्न |
| बेन्नेरि | ಬೆನ್ನೇರಿ | पाठीवर स्वार होऊन |
| तवक | ತವಕ | कुतूहल |
| तूगिनोडु | ತೂಗಿನೋಡು | तोलून पाहाणे |
| मीसे | ಮೀಸೆ | मिशा |
| नेरेगूदलु | ನೆರೆಗೂದಲು | पांढरे केस |
| कॆंपु बाऊट | ಕೆಂಪು ಬಾವುಟ | लाल निशाण |
| उद्दगल | ಉದ್ದಗಲ | लांबी-रुंदी संपूर्ण |
| होगळिके | ಹೊಗಳಿಕೆ | प्रशंसा |
| मूसे | ಮೂಸೆ | साचा |
| हंत | ಹಂತ | दशा |
| काडु | ಕಾಡು | त्रास देणे |
| दुडिमे | ದುಡಿಮೆ | परिश्रम |
| ओलवु | ಒಲವು | प्रेम |
| बेसत्त | ಬೇಸತ್ತ | कंटाळलेला |
| कार्मोड | ಕಾರ್ಮೋಡ | काळा ढग |

# परिशिष्ट (अ)

ब्रिटिशपूर्वकालीन साहित्य धार्मिक स्वरूपाचे असून काव्यात आहे. गद्य जे कांही होते त्याला साहित्याच्या दृष्टीने कांही महत्व नाही. या कारणा-स्तव पंपयुगापासून हरिदास युगापर्यंतच्या काळातील काव्य नमूना म्हणून दिले जात असे. हे काव्य 'हळेगन्नड' (जुने कानडी) मध्ये असल्यामुळे कवितांचा भावार्थ दिला गेला आहे.

## वसंत

ತಳಿರೊಳ್ ನೀನೆ ಬೆಡಂಗನಯ್ ನನೆಗಳೊಳ್
ನೀಂ ನೀರನೈ ಪುಷ್ಪಸಂ
ಕುಳದೊಳ್ ನೀನೆ ವಿಲಾಸಿಯೈ ಮಿಡಿಗಳೊಳ್ ನೀಂ
ಚೆಲ್ವನೈ ಪಣ್ತ ಪ
ಣ್ಗಳೊಳೊಳ್ಪೋ ಪೆರತೇನೊ ನೀನೆ ಭುವನಕಾರಾಧ್ಯನೈ
ಭೃಂಗಕೋ
ಕಿಳಕೀರ ಪ್ರಿಯ ಚೂತರಾಜ ತರುಗಳ್ ನಿನ್ನಂತೆ
ಚೆನ್ನಂಗಳೇ

वसंता ! पालवीतील शोभा तूच, फुलांच्या ताटव्यातील विलासी भुंगा तूच । भृंग, कोकिळा आणि पोपटाना प्रिय असणारा वसंत भुवनाराध्य आहे. आंब्याची झाडे देखील आम्हास वसंता इतकीच आवडतात.

पंप (आदि पुराणं.)

ಕಾಮನ ಸಾಮಜಂ ಮಧು ಮಹೀಶನ ಕೋಶಗೃಹಂ
ಮಧುವ್ರತ
ಸ್ತೋಮದ ಪಾನಭೂಮಿ ಮಲಯಾನಿಲನಾಡುವ
ಮಾಡುವೆಟ್ಟು
ಮಲ್ಲೀ ಮೃದುಲಾಸ್ಯ ಶಾಲೆ ಶುಕವೃಂದದ ಜೇವಣದಾಗರಂ
ಬಳಿಕ್ಕೀ ಮರ ಮತ್ತೆ ಮಾಮರವೆನ್ನುತ್ತ ಜನಿಟ್ಟನೊರಲ್ದು
ನಾಮಮಂ

वसंत कामदेवाचे साम्राज्य आहे, मधुमहीशाचे कोशगृह, मधमाशांची पानभूमी, मलयानिलाचे मोकळे मैदान, जाईजुईची नृत्यशाला, शुकवृंदांचे भोजनागार

षडक्षरी ( शबरशंकर विलास )

## काव्य लक्षण

ಮೃದು ಪದ ಗತಿಯಿಂ ರಸಭಾ
ವದ ಪೆರ್ಚಿಂ ಪಣ್ಯವನಿತೆವೋಲ್ ಕೃತಿ
ಸೌಂದರ್ಯದ ಚಾತುರ್ಯದ ಕಣಿಯೆನೆ
ವಿದಗ್ಧ ಬುಧ ಜನವ ಮನಮನಲೆಯುತೆ ವೇಡಾ॥

काव्य हे मृदुपदगतिमान, रसभाव पूर्ण वेश्यांगने प्रमाणे कृतिसौंदर्याचे आगर आणि विद्वानांचे चित्तहरण करणारे असावे.

—पंप कवि

ಸರಸತಿಯನಬಲೆಯಂ ಗೋ
ಣ್ಮುರಿ ಗೊಂಡರ್ಥಕ್ಕೆ ಕುದಿದು
ನೋಯಿಸುವವನ
ಕ್ಕುರಿಗನೆ ಪಾತಕನಾತಂ
ಸರಸ್ವತೀ ದ್ರೋಹನವನಾರ್
ಮುಟ್ಟುವರೋ?

केवळ अर्थासाठी सरस्वती सारख्या अबलेचा गळा दाबला तर तो पातकी होईल. सरस्वतीचा द्रोह करणाऱ्या पातक्याला सर्वांनी अस्पृश्य मानावे.

कवि रन्न

ಕವಿ ವಿಬುಧರ ಕಿವಿಯೊಳ್ ಸೂ
ಸುವ ನವರಸಮಿಳಿದು ತೀವಿ ತನುವಂ ಮನಮಂ
ಕವಿದು ಪೊರಸೂಸುತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ
ಪೇಳ್ವುದು ಕೃತಿಯಂ

कवी आणि पंडितांच्या कानांत ओतलेली नवरसाची धार काया आणि मन व्यापून जेव्हा सुखाश्रूंच्या रुपाने बाहेर सांडेल तेव्हांच ती काव्य म्हणविते.

षडक्षरि देव

ಮಳೆಯಿಲ್ಲದೆ ಪೊಯ್ವೀರಿಂ
ಬೆಳೆಗುಮೆ ಧರೆ ಮರುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇಳ್ದೊಡಮದು ಕೇಳ್
ಮಳಮಕ್ಕುಮೆ ಸಹಜಮಲ್ಲದಾತನ ಕಬ್ಬಂ.

पावसाच्या अभावी तप्त झालेल्या धरणीस शास्त्रबलाने सांत्वन करणे हे काही खरे काव्य नव्हे. ( भावनांच्या जागी बुद्धीचा काय उपयोग ? )

नयसेन कवी

ಕಬ್ಬಿಗರೋದು ಗಬ್ಬವ ಹಾಡುಗಬ್ಬವ
ಕಬ್ಬದೊಳೆರವರಿವೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬ ಹೇಳೆಲೆ ಸರಸ್ವತಿಯೇ

हे सरस्वती ! काव्य हे गेय आणि वाच्य असे दोन्ही रुपात आहे. एक उसासारखे व दुसरे बांबू सारखे तेव्हां मी कोणते रचू सांग !

## बसवेश्वर सु ११६०

वीरशैव लिंगायत मताचे संस्थापक बसवेश्वर यांनी आपल्या प्रभावी वचनांच्या योगे फार मोठी वैचारिक क्रांती घडवून आणली. ही वचने गद्या-सारखीच वाटतात पण त्यांतील काव्यगुण सहजच मनांत ठसतो.

## धर्माचा गाभा

ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದೊಡೆ ಕಿವಿ ಮೂಗ ಕೊಯ್ವುವನು. ಹಲವು ದೈವದ ಎಂಜಲ ತಿಂಬವರನೇನೆಂಬನಯ್ಯಾ ಕೂಡಲ ಸಂಗಮ ದೇವ!

